ಸಾಹಿತ್ಯ ಸಂಸ್ಕೃತಿ ಮಾಸಿಕ

# ಪ್ರತಿಸ್ಪಂದ



ಕೊಡು - ಕೊಳ್ಳುವಿಕೆಗಳ ಸಂಕರ ...

ಬೆಲೆ : 10 ರೂ

ಸಂಪುಟ : 1 ಸಂಚಿಕೆ : 3 ಮಾರ್ಚ್ 2013

# ಪ್ರತಿಸ್ಪಂದ

ಮಾರ್ಚ್ 2013
ಸಂಪುಟ : 1 ಸಂಚಿಕೆ :3



ಸಂಪಾದಕರು:
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com



ಮುದ್ರಕರು:
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

ಮುಖಪುಟ ವಿನ್ಯಾಸ ಕೃಪೆ:
ಅಂತರ್ಜಾಲ

ಚಂದಾ ವಿವರ:

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಫುಟವಾಗಿ ಬರೆಯಿರಿ.


ಒಳಪುಟಗಳಲ್ಲಿ

# ನಿಮ್ಮೊಂದಿಗೆ ....

**"A poem should not mean
But be".**

**Archibald Macleish**

ಜಾರ್ಜ್ ಆರ್ವೆಲ್ ಪ್ರಕಾರ ಪ್ರತಿಯೊಬ್ಬ ಲೇಖಕನಿಗೂ ಬರೆಯಲು ನಾಲ್ಕು ಪ್ರೇರಣೆಗಳಿರುತ್ತವೆ. ಮೊದಲನೆಯದು ತನ್ನ ಅಹಂ ಅನ್ನು ತಣಿಸಿಕೊಳ್ಳಲಿಕ್ಕಾಗಿ; ತಾನು ಸತ್ತ ನಂತರವೂ ಬದುಕಿರುವವರ ನೆನಪಿನಲ್ಲಿ ಉಳಿಯಲಿಕ್ಕಾಗಿ. ಎರಡನೆಯದು ಸಾಹಿತ್ಯ ಕೊಡುವ aesthetic ಸಂಭ್ರಮವನ್ನು ಅನುಭವಿಸಲಿಕ್ಕಾಗಿ. ಮೂರನೆಯದು ಇತಿಹಾಸದ ಸತ್ಯ/ಅಸತ್ಯತೆಗಳನ್ನು ಓದು/ಮರು-ಓದಿಗೆ ಒಳಪಡಿಸುವುದರಿಂದ ಮುಂದಿನ ಪೀಳಿಗೆಗೆ ಒದಗುವ ಅನುಕೂಲಕ್ಕಾಗಿ. ನಾಲ್ಕನೆಯದು ಪ್ರಪಂಚದ ನಡೆಯ ದಿಕ್ಕನ್ನು ತಾನು ಸರಿ ಎಂದು ಭಾವಿಸುವ ದಿಕ್ಕಿಗೆ ತಿರುಗಿಸುವ ರಾಜಕೀಯ ಹಂಬಲಕ್ಕಾಗಿ.

ಚಾಮ್ಸ್‌ಕಿಯನ್ ಭಾಷಿಕರಿಗೆ ಮತ್ತು Gis Jen ರಂತಹ ವಿವೇಕಿಗಳಿಗೆ ತೊಡಕಾಗಿರುವುದು ಪ್ರಾಪಂಚಿಕ ನಡೆಯ ದಿಕ್ಕನ್ನು ಮತಾಂಧರು, ಸರ್ವಾಧಿಕಾರಿಗಳು, ಬಂಡವಾಳಶಾಹಿಗಳು ತಮಗೆ ಬೇಕಾದ ರೀತಿಯಲ್ಲಿ ಕಟ್ಟಿಕೊಡಲು ಭಾಷೆಯನ್ನು ಬಳಸಿಕೊಳ್ಳುತ್ತಿರುವುದು. ಭಾಷಾ ಬಳಕೆಯ 'ರಾಜಕಾರಣ'ವು ಮಾಡಿರುವ ಅನಾಹುತಗಳು ಜಾತಿ ಸೃಷ್ಟಿಯಿಂದ ಹಿಡಿದು ಇತ್ತೀಚೆಗೆ ಭಯೋತ್ಪಾದನೆಯನ್ನು ವ್ಯಾಖ್ಯಾನಿಸುವ ರೀತಿಯವರೆಗೂ ಹಬ್ಬಿವೆ. ಆದರೆ ಈ ಎಲ್ಲಾ ಅನಾಹುತಗಳಿಗೆ ಪರಿಹಾರವನ್ನೂ ಕೂಡ ಭಾಷೆಯೇ ಸೂಚಿಸುತ್ತಿದೆ. ಅದೇ ಸ್ವಾರಸ್ಯಕರವಾದದ್ದು.

ಪ್ರಜಾಪ್ರಭುತ್ವ ನಮಗೆ ನೀಡಿರುವ ಮುಖ್ಯವಾದ ತಿಳುವಳಿಕೆ Right to 'free speech'. ಕಾವ್ಯ ಭಾಷೆ ಮಾತ್ರವೇ ವಾಕ್ ಶಕ್ತಿಗೆ ಸ್ವಾತಂತ್ರ್ಯ ನೀಡಬಲ್ಲದು. ಬಾರ್ಥ್ ಪ್ರಕಾರ ಪದ ಮತ್ತು ಅರ್ಥದ ನಡುವೆ ಇರುವ ಗೆರೆಗಳನ್ನು ಅಳಿಸಿಹಾಕಲು ಕಾವ್ಯ ಭಾಷೆ ಸದಾ ಶ್ರಮಿಸುತ್ತಿರುತ್ತದೆ. ಈ ಹೋರಾಟ ಕೆಲವೊಮ್ಮೆ ಕ್ರಾಂತಿಯ ಆವೇಗವನ್ನು ಪಡೆಯುತ್ತದೆ. ಇಂತಹ ಕ್ರಾಂತಿಯ ಆಯಾಮಗಳು ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮುದಾಯದ ಸಹಬಾಳ್ವೆಯನ್ನು ಹೊಂದಿಕೊಂಡು ಹೋಗುವಂತೆ ಸಂರಚಿಸುತ್ತಲೇ ಪ್ರಜಾಪ್ರಭುತ್ವಕ್ಕೆ ಶಕ್ತಿಯನ್ನು ತುಂಬುತ್ತಿರುತ್ತವೆ. ಬಿಳಿಯರ ಆಕ್ರಮಣದಿಂದ ಛಿದ್ರವಾಗುವ ಸಮುದಾಯಗಳ ಸ್ಥಿತಿಯಂತೆಯೇ ಭ್ರಾಮಕ ನೆಲೆಗಳಿಂದ ಕೌಟುಂಬಿಕ ಶಾಂತಿಯನ್ನು ನಾಶಪಡಿಸಿಕೊಳ್ಳುವ ವಿಲ್ಲಿ ಲೋಮನ್‌ನಂತಹವರು ಬದುಕುವ ರೀತಿಗಳೂ ಸಹ ಅಸಹನೀಯವಾಗಬೇಕಿದೆ.

ಸ್ವಾತಂತ್ರ್ಯವೆಂಬ ಪ್ರೇರಣೆಯನ್ನು ಅಧಿಕಾರವು ಮಬ್ಬಾಗಿಸುವ ಸಂದರ್ಭಗಳು ಹಿಂದೆಂದಿಗಿಂತಲೂ ಇವತ್ತು ಹೆಚ್ಚಾಗಿವೆ. ಸ್ವಾತಂತ್ರ್ಯಕ್ಕೆ ಜೀವ ತುಂಬುವ ಗತಿಗಳು/ಪ್ರಯತ್ನಗಳು ಹೆಚ್ಚು ಹೆಚ್ಚಾಗಿ ನಮಗೆ ತಿಳಿಯುವಂತಾಗಲಿ ಎಂಬುದೇ ಆಶಯ.

– ಸಂಪಾದಕ.

ಪ್ರಸ್ತುತ

# ಆರ್ಥರ್ ಮಿಲ್ಲರ್ ನ "ಸೇಲ್ಸ್‌ಮನ್ ಒಬ್ಬನ ಸಾವು"

ಸೋಲಿಗೆ ಎರಡು ಗುಣಗಳಿವೆಯೆಂದಾದರೆ, ಒಂದು ಸೋಲಿನಿಂದ ಗೆಲುವು ಸಾಧಿಸುವುದು, ಮತ್ತೊಂದು ಅದೇ ಸೋಲಿನಿಂದ ಪುನಃ ಸೋಲುವುದು. ಸೋಲು ಗೆಲುವಾಗಬೇಕೆಂದಾದರೆ, ಸೋಲಿಗೆ ಸಕಾರಣಗಳನ್ನು ಕಂಡುಕೊಳ್ಳುವುದು ಮತ್ತು ಸೋಲನ್ನು ಸಹಜವಾಗಿ ಒಪ್ಪಿಕೊಂಡು ಸೋಲಿನ ಕಾರಣಗಳನ್ನು ನಿರ್ವಂಚನೆಯಿಂದ ಸರಿಪಡಿಸಿಕೊಳ್ಳುವುದು ಹಾಗು ಸಕಾರಾತ್ಮಕ ಚಿಂತನೆಗಳಿಂದ ಪ್ರಯುತ್ನಶೀಲರಾಗುವುದು ಮುಖ್ಯವಾಗಿರುತ್ತದೆ. ಆದರೆ ಈ ಎಲ್ಲಾ ಬೆಳವಣಿಗೆಗಳಾಗಬೇಕೆಂದರೆ ವ್ಯವಸ್ಥೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಪೂರಕವಾಗಿರಬೇಕಾಗುತ್ತದೆ. ಬಂಡವಾಳಶಾಹಿ ಸಮಾಜ ಕಟ್ಟುತ್ತಿರುವ ಕನಸುಗಳಲ್ಲಿ ಲಾಭವನ್ನು ದ್ವಿಗುಣಗೊಳಿಸುವ ಸಮರ್ಥರಿಗೆ ಮಾತ್ರ ಪ್ರಾಶಸ್ತ್ಯ ಅಸಮರ್ಥನಿಗೆ ಬದುಕುವ ಅವಕಾಶ ಕೂಡ ಇಲ್ಲ. ಇಂತಹ ಸಂದರ್ಭದಲ್ಲಿ ವಸ್ತುನಿಷ್ಠವಾದ, ಸಹಜವಾದ ಒಳ ಅರಿವನ್ನು ಮನುಷ್ಯರು ತಮ್ಮ ವಿಚಾರಶಕ್ತಿಯಿಂದ ಗ್ರಹಿಸಿ ವ್ಯವಹರಿಸಬೇಕಾಗುತ್ತದೆ. ತಮ್ಮ ಇತಿಮಿತಿಗಳನ್ನು ತಿಳಿಯದೆ ಬದುಕಿನ ಸವಾಲುಗಳಿಗೆ ಎದುರಾದರೆ ಕೇವಲ ಭ್ರಮಾಲೋಕದಲ್ಲಿ ಬದುಕಬೇಕಾಗುತ್ತದೆ.

ಸೋಲಿನ ಪಾತಾಳಕ್ಕೆ ಇಳಿಯುತ್ತಿದ್ದರೂ ಗೆಲ್ಲುತ್ತಿದ್ದೇನೆ ಎಂದು ಭ್ರಮಿಸುವ 'Willy Loman' ಪಾತ್ರ ಅಮೇರಿಕಾದ ಸುಪ್ರಸಿದ್ಧ ನಾಟಕಕಾರ ಆರ್ಥರ್ ಮಿಲ್ಲರ್ ಅವರ ನಾಟಕ 'Death of a Salesman' ನಲ್ಲಿ ನೈಜವಾಗಿ ಚಿತ್ರಿತವಾಗಿದೆ. Willy Loman ಒಬ್ಬ ಸಾಮಾನ್ಯ Travelling Salesman. Excellence ಮತ್ತು Efficiency, Profit ಮತ್ತು Progress ಎಂದು ಜಪಿಸುವ ವ್ಯಾಗ್ನರ್ ಕಂಪನಿಯಲ್ಲಿ ಸತತವಾಗಿ 34 ವರ್ಷ ಕಾರ್ಯನಿರ್ವಹಿಸುತ್ತಾನೆ. ಇಳಿವಯಸ್ಸಿನಲ್ಲಿ ನ್ಯೂಯಾರ್ಕನಲ್ಲಿ ನೆಲೆಸಲು ವರ್ಗಾವಣೆ ಬಂiಸುತ್ತಾನೆ. ಆದರೆ ನ್ಯೂಇಂಗ್ಲೆಂಡ್‌ನಲ್ಲಿ ಸಮರ್ಥವಾಗಿ ಕೆಲಸ ನಿರ್ವಹಿಸಲು ಸಾಧ್ಯವಾಗದ ಕಾರಣ ಕಂಪನಿಯ ಮಾಲಿಕ ನಿರ್ದಾಕ್ಷಿಣ್ಯವಾಗಿ ವಿಲ್ಲಿಯನ್ನು ಕೆಲಸದಿಂದ ತೆಗೆದು ಹಾಕುತ್ತಾನೆ. ಒಬ್ಬ ಸಾಮಾನ್ಯ ಸೇಲ್ಸ್‌ಮನ್‌ನ ಕೌಟುಂಬಿಕ ಹೋರಾಟದ ಅಸಂಗತ ಜೀವನ ಈ ನಾಟಕದ ಕಥಾವಸ್ತು.

ವಿಲ್ಲಿಯ ಅಚಲವಾದ ಬದುಕಿನ ಸಿದ್ಧಾಂತವೆಂದರೆ, Personal attractiveness and being well-liked makes successful life ಎಂಬುದು. ಈತನ ಹೆಸರೇ ಸೂಚಿಸುವಂತೆ 'Willy' ಎಂದರೆ 'ಇಚ್ಛಾಶಕ್ತಿ' ಹೊಂದಿರುವವನು, ಮಹಾತ್ವಕಾಂಕ್ಷೆ ಹೊಂದಿರುವವನು. ತನ್ನ ಸಮಕಾಲೀನ ಸಂಚಾರಿ ಸೇಲ್ಸ್‌ಮನ್ ಡೇವ್ ಸಿಂಗಲ್ಮನ್‌ನ ಯಶಸ್ವೀ ಬದುಕಿನ ಗುಟ್ಟನ್ನು ಮಾದರಿಯಾಗಿ ಅನುಕರಿಸುತ್ತಾನೆ. ಮೊದಮೊದಲು ಯಶಸ್ಸು ಕೂಡ ಸಿಗುತ್ತದೆ. ತನ್ನ 'Well liked and well attractive' ವ್ಯಕ್ತಿತ್ವದಿಂದ ಎಲ್ಲರಿಂದಲೂ ಮೆಚ್ಚುಗೆ ಗಳಿಸುತ್ತಾನೆ. ಆದರೆ ಈ Loman ಕೆಳವರ್ಗಕ್ಕೆ ಸೇರಿದವನು ಕೂಡ. ಈತನ ಕನಸು ಮಹತ್ತಾದರೂ ತನ್ನ ವ್ಯಕ್ತಿತ್ವದಲ್ಲಿ ಸಣ್ಣತನಗಳನ್ನು, ಅವಾಸ್ತವಿಕ ಆದರ್ಶಗಳನ್ನು ರೂಢಿಸಿಕೊಂಡಿರುತ್ತಾನೆ. ತನ್ನ ಮಗನಾದ ಬಿಫ್ ನನ್ನು ಒಮ್ಮೆ ಫೌಂಟೆನ್ ಪೆನ್ ಕದಿಯಲು ಉತ್ತೇಜಿಸುತ್ತಾನೆ. ತನ್ನ ಆದರ್ಶ ಹೆಂಡತಿಯಾದ ಲಿಂಡಾಳಿಗೆ ವಂಚಿಸಿ ಮಿಸ್ ಫ್ರಾನ್ಸಿಸ್‌ಳೊಂದಿಗೆ ವಿವಾಹೇತರ ಸಂಬಂಧವನ್ನು ಹೊಂದಿರುತ್ತಾನೆ. ಈ ಅಕ್ರಮ ಬಿಫ್‌ಗೆ ತಿಳಿದ ಕ್ಷಣದಲ್ಲೇ ತನ್ನ ತಂದೆಯ ಬದುಕಿನ ಮೌಲ್ಯಗಳು ಅವೈಜ್ಞಾನಿಕವೂ ಮೌಲ್ಯರಹಿತವೆಂದೂ ಅರಿತು ತಂದೆಯ ಬಗ್ಗೆ ತಿರಸ್ಕಾರ ಬೆಳೆಸಿಕೊಳ್ಳುತ್ತಾನೆ. ಹೀಗೆ ಹತ್ತು ಹಲವು ವ್ಯಸನಗಳನ್ನು ಮೈಗೂಡಿಸಿ ಕೊಂಡು ವೈಯುಕ್ತಿಕ ಜೀವನದಲ್ಲಿ ಮೋಸಗಾರನಾಗಿಯೂ

ಶಕ್ತಿ ದೈಹಿಕ ಬಲದಿಂದ ಬರುವುದಿಲ್ಲ; ಅದು ಬರುವುದು ಅದಮ್ಯ ಇಚ್ಛಾಶಕ್ತಿಯಿಂದ.
– ಗಾಂಧೀಜಿ



ಲೋ ಮ್ಯಾನ್ ಪದಕ್ಕೆ ಅನ್ವರ್ಥವಾಗಿಯೂ ಬಾಳುತ್ತಾನೆ. ಸದಾ ಸಿಟ್ಟು, ಸಿಡುಕು, ಅಸಹನೆ ಮತ್ತು ಒಂಟಿತನ ಇವುಗಳು ವಿಲ್ಲಿ ಲೋಮನ್‌ಗೆ ಸಹಜವಾಗಿ ಮೈಗೂಡಿಕೊಂಡಿರುತ್ತವೆ. ತೀವ್ರ ಆರ್ಥಿಕ ಅಭದ್ರತೆ, ನಿರುದ್ಯೋಗ, ಹಿರಿಯ ಮಗ ಬಿಫ್ ನ ವಿಫಲತೆಯ ಬದುಕು, ಕಿರಿಯ ಮಗ ಹ್ಯಾಪಿ ಯ ಸ್ವಾರ್ಥ, ಕೃತಕ ವಿಲಾಸಿ ಬದುಕು ವಿಲ್ಲಿಯನ್ನು ಮತ್ತಷ್ಟು ಆತಂಕಕ್ಕೆ ದೂಡುತ್ತವೆ. ಕಂಪೆನಿಯ ಅಭ್ಯುದಯಕ್ಕಾಗಿ ತನ್ನ ಅಮೂಲ್ಯ ಸಮಯ ಸವೆಸಿದ್ದರೂ ಪ್ರಯೋಜನ ಆಗಿಲ್ಲ. ಇಳಿವಯಸ್ಸಿನಲ್ಲಿ, ದುಡಿಯಲಾರದೆ, ಬದುಕಲಾರದೆ, ತನ್ನ ಹೆಂಡತಿಗೆ ತನ್ನ ಸ್ಥಿತಿಯನ್ನು ವಿವರಿಸಲಾರದೆ ಬದುಕಿನ, ಜಂಜಡಗಳಿಂದ ಮಾನನೊಂದು ಮನಸ್ಸಿನ ಸ್ಥಿಮಿತವನ್ನು ಕಳೆದುಕೊಳ್ಳುತ್ತಾನೆ. ವರ್ತಮಾನವನ್ನು ಮರೆಯಲು ಭೂತಕಾಲದ ಯಶಸ್ಸನ್ನು ನೆನೆಯುತ್ತಾನೆ. ಭವಿಷ್ಯದಲ್ಲಿ ಹಿಂದಿನ ಯಶಸ್ಸು ನಿಜವಾಗ ಬಹುದೆಂಬ ಭ್ರಮೆಯನ್ನು ಹಂಬಲಿಸಿ, ತನ್ನ ಯಶಸ್ವೀ ಸೋದರ ಬೆನ್‌ನೊಂದಿಗೆ (ಆತ ಸತ್ತು ಒಂಬತ್ತು ತಿಂಗಳು ಕ್ರಮಿಸಿದ್ದರೂ) ಮಾತನಾಡುತ್ತಾ ತನ್ನ ಕೈ ತೋಟದಲ್ಲಿ ಹೊಸ ತಳಿಗಳ ಬೀಜಗಳನ್ನು ಹಾಗು ಸಸಿಗಳನ್ನು ನಾಟಿಮಾಡುತ್ತಾ ವಾಸ್ತವ ಬದುಕಿನ ತಲ್ಲಣ-ತಳಮಳಗಳಿಂದ ವಿಶ್ರಾಂತಿ ಪಡೆಯುವ ಪ್ರವೃತ್ತಿಯನ್ನು ರೂಢಿಸಿಕೊಂಡಿರುತ್ತಾನೆ.

ಈ ಯಾವುದೇ ತಾತ್ಕಾಲಿಕ ಭ್ರಮೆಗಳು ತನ್ನ ಸಹಾಯಕ್ಕೆ ಬರಲಾರವು ಎಂಬ ವಾಸ್ತವ ಅರಿವಾಗುತ್ತಲೇ ಅನ್ಯಮಾರ್ಗವಿಲ್ಲದೆ ಕಾರ್ ಅಪಘಾತದಲ್ಲಿ ತನ್ನನ್ನೇ ತಾನು ಕೊಂದು ಕೊಳ್ಳುತ್ತಾನೆ. ತನ್ನ ಸಾವಿನ ವಿಮೆ ಹಣ 20 ಸಾವಿರ ಡಾಲರ್ ಗಳಿಂದ ಬಿಫ್ ನ ವ್ಯವಹಾರಕ್ಕೆ ಅನುಕೂಲವಾಗಿ ಅವನ ಭವಿಷ್ಯ ಉಜ್ವಲವಾಗುವುದೆಂಬ ಕನಸಿನೊಂದಿಗೇ ಇಹಲೋಕ ತ್ಯಜಿಸುತ್ತಾನೆ. ತನ್ನ ಸಾವಿನ ನಂತರ ತನ್ನ ಅಂತ್ಯಕ್ರಿಯೆಗೆ ಸಾವಿರಾರು ಜನರು ಬರುವರೆಂಬ ಅವನ ಕನಸು ಸುಳ್ಳಾಗುತ್ತದೆ. ತನ್ನ ತಂದೆಯನ್ನು ದ್ವೇಷಿಸುವ ಬಿಫ್ ವಿಮೆ ಹಣವನ್ನು ತಿರಸ್ಕರಿಸುತ್ತಾನೆ ಹಾಗು ಈ ಹಣವನ್ನು ಹ್ಯಾಪಿ ತನ್ನ ವಿಲಾಸಿ ಜೀವನಕ್ಕೆ ದುರ್ಬಳಕೆ ಮಾಡಿಕೊಳ್ಳುತ್ತಾನೆ.

ಹಣವೇ ಪ್ರಧಾನವಾಗುವ ವಾಣಿಜ್ಯ ವ್ಯವಸ್ಥೆಯಲ್ಲಿ ಸಹಜ ಬದುಕಿನ ಶಾಂತಿ ನೆಮ್ಮದಿಗಳನ್ನು ಕಳೆದುಕೊಳ್ಳುವ ಕತೆ ಹೇಳುವ "ಒಬ್ಬ ಸೇಲ್ಸ್‌ಮನ್ ನ ಸಾವು" ನಾಟಕ ಆಧುನಿಕ ಜಾಗತೀಕರಣದ ಸಂದರ್ಭವನ್ನು ವ್ಯವಸ್ಥಿತವಾಗಿ ವಿಡಂಬಿಸುತ್ತದೆ.

– ಶ್ರೀನಿವಾಸಪ್ಪ .ಜಿ.
9964529900

**:ವಿಶೇಷ ಸೂಚನೆ :**

ಈ ಪತ್ರಿಕೆಗೆ ಲೇಖನಗಳನ್ನು ಕಳುಹಿಸಲು ಇಚ್ಛಿಸುವವರು ನುಡಿ ತಂತ್ರಾಂಶದಲ್ಲಿ ಟೈಪ್ ಮಾಡಿ prathispandha@gmail.comಗೆ ಕಳುಹಿಸುವುದು.

ಇಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯ ವಿಚಾರಗಳಿಗೆ ಲೇಖಕರೇ ಜವಾಬ್ದಾರರು
ಲೇಖನಗಳನ್ನು ಕಳುಹಿಸುವ ಲೇಖಕರು ಓದುಗರ ಅನುಕೂಲಕ್ಕಾಗಿ ಹೆಸರು, ವಿಳಾಸ, ದೂರವಾಣಿ ಸಂಖ್ಯೆ ಇಮೇಲ್ ವಿಳಾಸವನ್ನು ನೀಡತಕ್ಕದ್ದು.

| ಸಾಹಿತ್ಯ ಶೈಲಿ/ ರೂಪ | Roland Barthes ನ ವಿಶ್ಲೇಷಣಾ ನೆಲೆಯಲ್ಲಿ Edger Allen Poe ನ ಸಣ್ಣಕತೆ *'The Facts in the Case of M.Valdemer'* (ಭಾಗ-2) |
|---|---|





ರೋಲ್ಯಾಂಡ್‌ಬಾರ್ಥ



ಎಡ್ಗರ್ ಅಲನ್ ಪೋ

ಕಥಾ ವಿಶ್ಲೇಷಣೆಯ ಮುಂದುವರೆದ ಭಾಗ.........

Lexia 2ರಿಂದ 17ರ ವರೆಗಿನ ವಿವರಣೆಗಳು: ಕ್ರಮಸಂಖ್ಯೆಯನ್ನು ಅನುಸರಿಸುವ ಸಾಲುಗಳು ಪೋ ನ ಕಥಾ ಪಠ್ಯದಿಂದ ಆಯ್ದ ವಾಕ್ಯಗಳು.

(2)"Valdemarನ ಅಸಾಧಾರಣ (Extra ordinary) ಅವಸ್ಥೆ ಚರ್ಚೆಗೆ ಗ್ರಾಸವಾಗಿರುವುದು ಆಶ್ಚರ್ಯವೇನಲ್ಲ"

Extraordinary ಎಂದರೆ ಅಸಾಧಾರಣ ವಾದದ್ದು ಎಂದು. ಇದು ಸಾಮಾನ್ಯ ಪರಿಸ್ಥಿತಿಗಿಂತ ಭಿನ್ನ ವಾಗಿದೆ. ಆದರೆ ಸಹಜತೆಗೆ ಭಂಗ ಬಂದಿಲ್ಲ. ಕಥೆಯಲ್ಲಿ ಅಸಹಜತೆಯಿದೆ ಯಾಕೆಂದರೆ Valdemerನು ವೈದ್ಯಕೀಯ ಮರಣ ಹೊಂದಿದ್ದರೂ hypnosisನ ಮುಖಾಂತರ ಅವನನ್ನು ಬೌದ್ಧಿಕವಾಗಿ ಜೀವಂತವಾಗಿ ಡಲಾಗಿದೆ. ವ್ಯಕ್ತಿಯನ್ನು ವೈಜ್ಞಾನಿಕ ಪರಿಧಿಯೊಳಗೇ ಇಡಲಾಗಿದೆ. ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ಆಯಾಮಗಳನ್ನು ವಿಚಿತ್ರವಾಗಿ ಕಟ್ಟಿ ಹಾಕಲಾಗಿದೆ. ಇಂತಹ ಹೊಂದಿಕೆ (bonding) 19ನೇ ಶತಮಾನದ ಜನರಿಗೆ ಹೊಸದಾಗಿತ್ತು. ಅಲೌಕಿಕ ವಿಷಯಗಳನ್ನು ವೈಜ್ಞಾನಿಕವಾಗಿ ಗಮನಿಸುವುದಕ್ಕೆ ಅವರಿಗೆ ತುಂಬಾ ಉತ್ಸಾಹವಿತ್ತು.

(3) "ಸಂಬಂಧಪಟ್ಟವರು ಈ ವಿಷಯವನ್ನು ಸದ್ಯದ ಮಟ್ಟಿಗಾದರೂ ಅಥವಾ ತನಿಖೆ ನಡೆಸಲು ಮುಂದಿನ ಅವಕಾಶ ದೊರೆಯುವವರೆಗಾದರೂ ಮುಚ್ಚಿಡಬೇಕೆಂದು ಅಂದುಕೊಂಡಿದ್ದರು".

ಈ lexiaನಲ್ಲಿ 'ತನಿಖೆ' ಎನ್ನುವ ಪದವು ವೈಜ್ಞಾನಿಕ ಸಂಕೇತವನ್ನು ಸೂಚಿಸುತ್ತದೆ, ಆದರೆ ತನಿಖೆ ಎನ್ನುವ ಪದದ ಉಗಮವು ಪತ್ತೇದಾರಿ ಕಥೆಗೆ ಸಂಬಂಧಿಸಿದ್ದು. 19ನೇ ಶತಮಾನದಲ್ಲಿ Poeನಿಂದ ಪತ್ತೇದಾರಿ ಕಾದಂಬರಿಗಳು ಪ್ರಾರಂಭವಾದವು. ಪತ್ತೇದಾರಿ ರಹಸ್ಯ ಸಂಕೇತ ಹಾಗೂ ವೈಜ್ಞಾನಿಕ ಸಂಕೇತಗಳು ಜೊತೆಜೊತೆಯಾಗಿರುವುದು ಈ lexis ನ ವಿಶೇಷತೆ.

ಪಠ್ಯದಲ್ಲಿ ವ್ಲಾಡಿಮಿರನ ಸಾವಿನ ನಂತರದ ಬದುಕನ್ನು ಮುಚ್ಚಿಡುವ ಕೆಲಸ ಎರಡು ಸಂಕೇತಗಳಿಂದಾಗುತ್ತದೆ. ಮೊದಲನೆಯದು ವೈಜ್ಞಾನಿಕ ಸಂಕೇತ. ಡಾಕ್ಟರ್‌ಗೆ ವ್ಲಾಡಿಮಿರನ ಸಾವನ್ನು ವೈಜ್ಞಾನಿಕವಾಗಿ ಘೋಷಿಸಲಾಗುತ್ತಿಲ್ಲ. ಹಾಗೂ ಸಾಂಕೇತಿಕ/ಸಾಂಸ್ಕೃತಿಕ ಸನ್ನಿವೇಶದಲ್ಲಿ ವ್ಲಾಡಿಮಿರನ ಸಾವಿನ ಬದುಕನ್ನು ಸಾರ್ವಜನಿಕವಾಗಿ ಪ್ರಕಟಿಸುವುದು ಭಯಾನಕ ಹಾಗೂ ನಿಷಿದ್ಧ. ಈ ಎರಡೂ ಸಂಕೇತಗಳೂ ಅನಿಶ್ಚಿತ ಹಾಗೂ ನಿರ್ಧರಿಸಲಾಗದ ವಿಷಯಗಳು. ಈ ಅನಿಶ್ಚಿತತೆಯೇ ಒಳ್ಳೆಯ ಕಥನವೊಂದನ್ನು ಆಗಿಸುತ್ತದೆ ಅನ್ನುತ್ತಾನೆ ಬಾರ್ಥ.

(4) "ಇಂತಹ ಉತ್ಪ್ರೇಕ್ಷೆಯ ಪರಿಸ್ಥಿತಿ, ಸಮಾಜದಲ್ಲಿ ವಿಷಾದದ ಪ್ರತಿನಿಧಿತ್ವ ಹಾಗೂ ಅಗಾಧವಾದ ಅಪನಂಬಿಕೆಯನ್ನು ಹುಟ್ಟುಹಾಕಿದೆ".

ಇದು ವಿವರಣಾತ್ಮಕ ಸಂಕೇತ. (Narrative code) ಇದು ಓದುಗನ ಆಸಕ್ತಿಯನ್ನು ಕೆರಳಿಸಿ ಪಠ್ಯಕ್ಕೆ ಗಿರಾಕಿಗಳನ್ನು ಹಿಡಿದುಕೊಡುತ್ತದೆ. ವ್ಲಾಡಿಮಿರನ ವಿಷಯವು ಗೂಢತೆ ಹಾಗೂ ರಹಸ್ಯದಿಂದ ಕೂಡಿದೆ ಎನ್ನುವುದು ಮೇಲಿನ Lexisನಿಂದ ಸ್ಪಷ್ಟವಾಗುತ್ತದೆ. ಈ ರಹಸ್ಯದ ಸಂಕೇತವನ್ನು ಕಥೆಯಲ್ಲಿ ಮೂರನೆ ಬಾರಿಗೆ ತೋರಿಸಲಾಗಿದೆ. ವ್ಲಾಡಿಮಿರನ ವೃತ್ತಾಂತದಲ್ಲಿ ರಹಸ್ಯವಿದೆ ಎನ್ನುವ ತಿಳುವಳಿಕೆಯೇ ಓದುಗರಿಗೆ ಕಥೆಯನ್ನು ಓದುವ ಆಸಕ್ತಿಯನ್ನು ಹೆಚ್ಚಿಸುತ್ತದೆ.

(5) "ಹಾಗಾಗಿ ನಾನು ವ್ಲಾಡಿಮಿರನ ವೃತ್ತಾಂತದಲ್ಲಿ ಸತ್ಯಾಂಶವನ್ನು ವಿವರಿಸುವುದು ಅವಶ್ಯಕವಾಗಿದೆ."

'ಸತ್ಯಾಂಶ' ಅನ್ನುವ ಪದವು ಗೂಢಾರ್ಥ ಮತ್ತೆ ವೈಜ್ಞಾನಿಕ ಸಂಕೇತವನ್ನು ಬಿಂಬಿಸುತ್ತದೆ. ಯಾಕೆಂದರೆ ವಾಸ್ತವಾಂಶವನ್ನು ಬೇಧಿಸುವ ಆಶಯ ಸಾರಿರುವುದು ವಿಜ್ಞಾನದಲ್ಲಿಯೇ. ಸತ್ಯಾಂಶವನ್ನು ಬೇಧಿಸಬೇಕೆಂದರೆ

ರಹಸ್ಯವನ್ನು ವದಂತಿಗಳಿಂದ, ಗಾಳಿ ಸುದ್ದಿಗಳಿಂದ ಹೊರತರಬೇಕೆಂದರ್ಥ. ಸತ್ಯಾಂಶಕ್ಕೂ, ಗಾಳಿಸುದ್ದಿಗೂ ಪ್ರತಿರೋಧವಿದೆ. ಹಾಗಾಗಿ ಈ ಪದಾಂಶ (Lexia) ದಲ್ಲಿನ ವೈಜ್ಞಾನಿಕ ಸಂಕೇತ, ಗೂಢತೆಯನ್ನು ರಹಸ್ಯಾರ್ಥವನ್ನು ವಿರೋಧಿಸುತ್ತದೆ. ವೈಜ್ಞಾನಿಕ ಸಂಕೇತ ವ್ಲಾಡಿಮಿರನ ವೃತ್ತಾಂತದಲ್ಲಿರುವ ಅಜಾಗ್ರತ ವ್ಯವಸ್ಥೆಯನ್ನು, ಸಂಕೇತವನ್ನು ವಿರೋಧಿಸುತ್ತದೆ. ಹಾಗಾಗಿ ಕಥೆಗಾರ/ಕಥೆಯ ಮಾತುಗಾರ ಒಂದು ವಿವರಣಾತ್ಮಕ ಜಾಣ್ಮೆಯಿಂದ ಒಬ್ಬ ವಿಜ್ಞಾನಿಯ ಪಾತ್ರವನ್ನು ಸೃಷ್ಟಿಸಿದ್ದಾನೆ. Lexia ದ ಅರ್ಥ ಸೂಚಕ (Signifier) ವೈಜ್ಞಾನಿಕವಾದ ದೃಷ್ಟಿಕೋನವನ್ನು ಬಿಂಬಿಸುತ್ತಿದ್ದರೂ, ಅದು ರಹಸ್ಯತೆಯ ಚೌಕಟ್ಟಿನ ಮೇಲೆ ತನ್ನ ವಾದವನ್ನು ಮಂಡಿಸುತ್ತದೆ. ಹಾಗಾಗಿ ಇದು ಸಾಂಕೇತಿಕ ಅಥವಾ ಸಾಂಸ್ಕೃತಿಕ ಸಂಕೇತ.

ಮೂರು 'ನಾನು'ಗಳು Edgar Allen Poe ನ ಕಥೆಯಲ್ಲಿ ಇವೆ. ಮೊದಲನೆಯ 'ನಾನು' ನಮಗೆ ಕಥೆಯನ್ನು ವಿವರಿಸುವ ಮತ್ತು ವಾಸ್ತವಾಂಶವನ್ನು ಪ್ರತಿಪಾದಿಸುವ ಕಥನಕಾರ, ಅವನ ಅನುಗುಣವಾಗಿ ನೀನು ಅನ್ನುವುದು ಕಥೆಯ ಓದುಗನಾಗುತ್ತಾನೆ. ಎರಡನೆಯ 'ನಾನು' ನ್ಯಾಯಾಲಯದಲ್ಲಿನ ಸಾಕ್ಷಿದಾರ. ಅದಕ್ಕೆ ಅನುಗುಣವಾಗಿ ನ್ಯಾಯಾಲಯದಲ್ಲಿ ಹಾಜರಿರುವ ವಿಜ್ಞಾನಿಗಳು ಹಾಗೂ ಜ್ಯೂರಿಗಳು 'ನೀವು' ಆಗುತ್ತಾರೆ, ಮೂರನೆಯ 'ನಾನು' ವ್ಲಾಡಿಮಿರನ ಮೇಲೆ ಪ್ರಯೋಗ ಮಾಡುತ್ತಿರುವ ವಿಜ್ಞಾನಿ, ಅದಕ್ಕನುಗುಣವಾದ 'ನೀನು' ವ್ಲಾಡಿಮಿರನೇ ಆಗುತ್ತಾನೆ.

(6) "ಈ ಸಂಕ್ಷಿಪ್ತ ವಾಸ್ತವಾಂಶಗಳು ಯಾವುವೆಂದರೆ,"

"ಈ ವಾಕ್ಯದಲ್ಲಿರುವುದು ಒಂದು ಭಾಷಾ ನೈಪುಣ್ಯದ ಸಂಕೇತ. ಈ ವಾಕ್ಯ ಕಥೆಯ ಸರಹದ್ದನ್ನು ಸೂಚಿಸುತ್ತದೆ. 'ಸಂಕ್ಷಿಪ್ತ' ಎಂಬ ಪದವು ಒಂದು ವಿವರಣಾತ್ಮಕ ಸಂಕೇತವಾಗಿದ್ದು, "ಕಥೆ ತುಂಬಾ ದೊಡ್ಡದೇನೂ ಇಲ್ಲ, ಹೆಚ್ಚು ಹೊತ್ತು ತೆಗೆದುಕೊಳ್ಳುವುದಿಲ್ಲ" ಎನ್ನುವ ಖಾತ್ರಿಯನ್ನು /ಭರವಸೆಯನ್ನು ನೀಡುತ್ತದೆ. ಈ ವಾಕ್ಯ ನಮ್ಮ ಆಸಕ್ತಿಯನ್ನು ಹಿಡಿದಿಡಲು ಮತ್ತು ಕಥೆಯ ಸಂಬಂಧವನ್ನು ಕಾಯ್ದಿಟ್ಟುಕೊಳ್ಳಲು ಸಹಕರಿಸುತ್ತದೆ. ಸಂಕ್ಷಿಪ್ತ ಎನ್ನುವ ಪದವೇ ವೈಜ್ಞಾನಿಕ ಸಂಕೇತವನ್ನು ಹೇಳುತ್ತದೆ. ಏಕೆಂದರೆ ವೈಜ್ಞಾನಿಕ ಭಾಷೆ, ಸಂಕ್ಷಿಪ್ತವಾಗಿ ವಸ್ತುನಿಷ್ಠವಾಗಿರುತ್ತದೆ. ಹಾಗೂ ಭಾಷೆಗಿಂತ ಹೆಚ್ಚಾಗಿ ವಾಸ್ತವಾಂಶಕ್ಕೆ ಪ್ರಾಮುಖ್ಯತೆ ಕೊಡಲಾಗುತ್ತದೆ.

(7) "ಇತ್ತೀಚಿನ ಮೂರು ವರ್ಷಗಳಿಂದ ವಶೀಕರಣ ವಿದ್ಯೆ ನನ್ನ ಗಮನವನ್ನು ಸೆಳೆಯುತ್ತಿದೆ".

ಕಾಲಾನುಕ್ರಮಣಿಕೆಯ ಸಂಕೇತವನ್ನು ಎಲ್ಲಾ ಕಥಾನಕಗಳಲ್ಲೂ ಗಮನಿಸಬೇಕು. 'ಇತ್ತೀಚಿನ ಮೂರು ವರ್ಷಗಳಿಂದ' ಈ lexia ನಲ್ಲಿ 2 ಸಂಕೇತಗಳು ಸೇರಿವೆ. ಮೊದಲನೆಯದು ಸರಳವಾದದ್ದು. ವ್ಲಾಡಿಮಿರನ ಮೇಲೆ ಆಗುವ ಪ್ರಯೋಗದ ತಯಾರಿಯ ಪ್ರಾರಂಭವನ್ನು ಈ lexia ತೋರಿಸುತ್ತದೆ. ಎರಡನೆಯ ಅರ್ಥ ಸತ್ಯಾಂಶವನ್ನು ಹೇಳಲು ಒತ್ತಾಸೆ ಕೊಡುತ್ತದೆ. (3 ವರ್ಷದ ಬದಲು 7 ವರ್ಷವೆಂದು ಕಥನಕಾರ ಹೇಳಿದ್ದರೆ ಕಥೆಯ ಮೇಲೆ ಈ ಕಾಲ ಯಾವುದೇ ಪರಿಣಾಮ ಬೀರುತ್ತಿರಲಿಲ್ಲ). ಕಡಿಮೆ ಸಮಯಾವಧಿ ಸತ್ಯಾಂಶವನ್ನು ಹೇಳಲು ಆಧಾರ ಕೊಡುತ್ತದೆ. ಈ lexis ನಿಂದ ಕಥೆಯ ಕ್ರಿಯಾನುಕ್ರಮಣಿಕೆ ಶುರುವಾಗುತ್ತದೆ. ಇದು ವ್ಲಾಡಿಮಿರನ ಮೇಲಿನ ಪ್ರಯೋಗವನ್ನು ಇನ್ನೂ ಶುರು ಮಾಡದಿದ್ದರೂ ಇಡೀ ಪ್ರಯೋಗದ ಕಾರ್ಯಕ್ರಮವನ್ನು ಪ್ರಾರಂಭಿಸುತ್ತದೆ.

ಮೊದಲ ಬಾರಿಗೆ ವಶೀಕರಣ ಎನ್ನುವ ಪದ ಕಥಾನಕದಲ್ಲಿ ಬಂದಿದೆ. ಇದು ಒಂದು ಸಾಂಸ್ಕೃತಿಕ ಸಂಕೇತ. ವಶೀಕರಣ 19ನೇ ಶತಮಾನದಲ್ಲಿ ಬಹಳವಾಗಿ ಚಾಲ್ತಿಯಲ್ಲಿದ್ದ ವಿಚಾರ. Magnetism ಅನ್ನುವ ವಿಚಾರವನ್ನು ಕಂಡುಹಿಡಿದವನು Mesmer. ಇದನ್ನು Mesmerism (ವಶೀಕರಣ) ಎಂದು ಕರೆದರು. Magnetism ನಿಂದ ನಿದ್ರಾನಡಿಗೆ, Hypnosis ನಂಥಹ ಮನಸ್ಥಿತಿಗಳನ್ನು ಸೃಷ್ಟಿಸಬಹುದಾಗಿತ್ತು. 1829ರಲ್ಲಿ ಫ್ರಾನ್ಸ್‌ನಲ್ಲಿ ಹಲವಾರು ವಶೀಕರಣ ಸಾಮಗ್ರಿಗಳು ಬಳಕೆಯಲ್ಲಿದ್ದವು ಮತ್ತು ವಶೀಕರಣ ಮಾಡುವವರು ಹೆಚ್ಚಾಗಿದ್ದರು. 1829 ರಲ್ಲಿ Hypnosis ಅನ್ನು ಬಳಸಿಕೊಂಡು ನೋವಿಲ್ಲದ ಶಸ್ತ್ರಚಿಕಿತ್ಸೆಯಿಂದ ಹೊಟ್ಟೆಯ ಗೆಡ್ಡೆಗಳನ್ನು ತೆಗೆಯ ಬಲ್ಲ ಪ್ರಯೋಗಗಳು ನಡೆದವು. 1850ರಲ್ಲಿ ಕಲ್ಕತ್ತಾದ ವಶೀಕರಣ ಆಸ್ಪತ್ರೆಗಳಲ್ಲಿ ನೋವಿಲ್ಲದೆ ಹೆರಿಗೆ ಮಾಡಿಸಲಾಯಿತು. ಇಂತಹ ಸಂದರ್ಭದಲ್ಲಿ ಸೃಷ್ಟಿಯಾದ ವ್ಲಾಡಿಮಿರನ ವೃತ್ತಾಂತವು ಈಗಾಗಲೇ ವೈಜ್ಞಾನಿಕ ಭ್ರಮೆಯಲ್ಲಿದ್ದ ಜನರಿಗೆ ಆಕರ್ಷಕವಾಗಿ ಕಂಡಿದೆ.

(8) "ಇತ್ತೀಚೆಗಿನ 9 ತಿಂಗಳುಗಳಲ್ಲಿ ನಾನು ಮಾಡಿದ ಹಲವಾರು ಪ್ರಯೋಗಗಳಲ್ಲಿ, ನನಗೆ ತಕ್ಷಣ ಅನಿರೀಕ್ಷಿತವಾದ ಒಂದು ವಿಚಾರ ಹೊಳೆಯಿತು".

ಇಲ್ಲಿ ಕಾಲಾನುಕ್ರಮಣಿಕೆಯ ಸಂಕೇತವಿದೆ. ಇದು ಪ್ರಸ್ತುತತೆಯ ಅರ್ಥವನ್ನು ಕೊಡುತ್ತದೆ.

(9) "ಅದು ಏನೆಂದರೆ, ಇದುವರೆಗಿನ ವಶೀಕರಣ ಕಾರ್ಯಕ್ರಮಗಳಲ್ಲಿ ಒಂದು ಬಹು ಮುಖ್ಯ ವಿಷಯವನ್ನು ಬಿಟ್ಟುಬಿಡಲಾಗಿದೆ".

ಈ ಸಾಲಿನಲ್ಲಿ ವ್ಲಾಡಿಮಿರನ ಮೇಲೆ ನಡೆಸುವ ಕಾರ್ಯಾಚರಣೆಯ ಕಾರ್ಯಕ್ರಮವನ್ನು ವಿವರಿಸುವ ಕೆಲಸ ಮುಂದುವರಿಯುತ್ತದೆ. ಈ ಕಾರ್ಯಕ್ರಮದ ವಿಶೇಷತೆ ಏನೆಂದರೆ ಇದುವರೆಗೂ ವೈದ್ಯಕೀಯವಾಗಿ ಮರಣ ಹೊಂದಿದ ವ್ಯಕ್ತಿಯ ಮೇಲೆ ವಶೀಕರಣ ಪ್ರಯೋಗ ನೆರವೇರಿಲ್ಲ ಎಂಬುದು. ಈ ವಾಕ್ಯದ ಗೂಢಾರ್ಥ ಒಂದು ಸಂಕೇತ. ಸಾವಿನ ವ್ಯಕ್ತಿಯ ಮೇಲಿನ ಪ್ರಯೋಗ, ಅದಕ್ಕೆ ಹೊಂದಿಕೊಂಡಿರುವ ನಿಷೇಧ, ಭಯ, ಭೀಕರತೆ ಎಲ್ಲವೂ ಈ ಸಂಕೇತದಿಂದ ಉಂಟಾಗುತ್ತದೆ.

(10) "ಇದುವರೆಗೂ ಯಾವ ವ್ಯಕ್ತಿಯನ್ನೂ ವೈದ್ಯಕೀಯ ಸಾವಿನಲ್ಲಿ (in Articulo Mortis) ವಶೀಕರಣ ಮಾಡಲಾಗಿಲ್ಲ."

(a) ಈ lexis ನಲ್ಲಿ ವ್ಲಾಡಿಮಿರನ ಮೇಲಿನ ಕಾರ್ಯಾಚರಣೆಯನ್ನು ಪ್ರಕಟಪಡಿಸಲಾಗಿದೆ.

(b) Articulo Morti ಅನ್ನುವ ಪದ ವೈಜ್ಞಾನಿಕ ಸಂಕೇತವನ್ನು ಬಿಂಬಿಸುತ್ತದೆ. ಅದು ಒಂದು ಪರಿಚಯವಿಲ್ಲದ ಹೊಸ ಪದ. Articulo Mortis ಒಂದು ನಿಷಿದ್ಧವಾದ, ಪ್ರತಿಬಂಧಿಸಿದ, ಸಾಂಕೇತಿಕ code ಅನ್ನು ಬಿಂಬಿಸುತ್ತದೆ. ನಮಗೆ ತಿಳಿದಿರುವ ಹಾಗೆ ಜೀವ ಮತ್ತು ಸಾವು ಎರಡೂ ಬೇರ್ಪಟ್ಟ ಸ್ಥಿತಿಗಳು; ಮತ್ತು ಎರಡೂ ವಿರುದ್ಧ ದಿಕ್ಕಿನಲ್ಲಿರುವಂಥಹವು. ಆದರೆ ಕತೆಯಲ್ಲಿ ಎರಡನ್ನೂ ಕೈಗೆತ್ತಿಕೊಳ್ಳಲಾಗಿದೆ. ಒಂದಕ್ಕೊಂದು ಅತಿಕ್ರಮಣ ಮಾಡುವ ಸ್ಥಿತಿಯನ್ನು ತೋರಿಸುತ್ತಾ, ಭೀಕರತೆಯ ಸಾಂಕೇತಿಕ ಅರ್ಥವನ್ನು/ ನಿಯಮವನ್ನು/code ನ್ನು ಸೃಷ್ಟಿಸಿ ಸಾವು ಬದುಕಿನ ವಿಂಗಡನೆಯನ್ನು ಉಲ್ಲಂಘಿಸಲಾಗಿದೆ.

11. "ನಾವು ಕಾಯ್ದು ನೋಡಬೇಕಾಗಿರುವುದೇನೆಂದರೆ"

12."ಮೊದಲನೆಯದು ಇಂಥಹ ಕಾರ್ಯವಿಧಾನದ ಅನುಕ್ರಮಣಿಕೆಯಲ್ಲಿ, ಇಂತಹ ವೈಜ್ಞಾನಿಕ ಸಾವಿನಲ್ಲಿರುವ ವ್ಯಕ್ತಿ ವಶೀಕರಣಕ್ಕೆ (Magnetism) ಒಳಗಾಗುವ ಅಥವಾ ಪ್ರಭಾವಕ್ಕೆ ಸಿಲುಕುವ ಸಾಧ್ಯತೆ ಇದೆಯೇ?".

ಈ ವಾಕ್ಯಾಂಶ ಅಥವಾ lexis ನಲ್ಲಿ ವಶೀಕರಣದ ಕಾಂತರ್ನಾನುಕ್ರಮಣಿಕೆಯಲ್ಲಿನ ಮೊದಲನೆ ಸಮಸ್ಯೆಯನ್ನು ಹೇಳುತ್ತದೆ.

(13) ಎರಡನೆಯದು, ಹಾಗೇನಾದರೂ ಸಾಧ್ಯತೆ ಇದ್ದಲ್ಲಿ, ವಶೀಕರಣ, Articulo Mortis ನಲ್ಲಿ ಕುಂಠಿತವಾಗುತ್ತದೆಯೋ ಅಥವಾ ಹೆಚ್ಚಾಗುತ್ತದೆಯೋ ?

(a) ಇಲ್ಲಿ ಕಥೆಯ ಕಾರ್ಯವಿಧಾನದಲ್ಲಿನ ಎರಡನೇ ಸಮಸ್ಯೆಯನ್ನು ವಿವರಿಸಲಾಗಿದೆ. ಎರಡನೇ ಸಮಸ್ಯೆ ಮೊದಲನೆ ಸಮಸ್ಯೆಯ ಉತ್ತರವನ್ನು ಅವಲಂಬಿಸಿದೆ. ಇದು ತನ್ನಿಂದ ತಾನೇ ತಿಳಿಯುವಂಥದ್ದು.

(b) ಮೊದಲನೆ ಸಮಸ್ಯೆ ವಶೀಕರಣ ಸಾಧ್ಯವಾಗುವ ಸ್ಥಿತಿ ಇದೆಯೇ ಎಂದು ತಿಳಿಯುತ್ತದೆ. ಎರಡನೆ ಸಮಸ್ಯೆ ವಶೀಕರಣದ ಆಳತೆಯನ್ನು ತಿಳಿದುಕೊಳ್ಳುವುದಾಗಿದೆ.

(14) ಮೂರನೆಯದ್ದು ವಶೀಕರಣವು ಎಷ್ಟು ಸಮಯದವರೆಗೂ, ಸಾವಿನ ಅತಿಕ್ರಮಣಿಕೆಯನ್ನು ತಡೆಯಬಹುದು?

(a) ವಶೀಕರಣ ಕಾರ್ಯಕ್ರಮದ ಮೂರನೆ ಸಮಸ್ಯೆಯನ್ನು ಈ Lexis ತಿಳಿಸುತ್ತದೆ. ವಶೀಕರಣದಿಂದ ಸಾವನ್ನು ಬಂಧಿಸಬಹುದಾದರೆ ಎಲ್ಲಿಯವರೆಗೆ ? ಈ ಪ್ರಶ್ನೆಗೆ ನೇರವಾದ ಉತ್ತರವನ್ನು ಕಥೆ ಕೊಡುವುದಿಲ್ಲ. ಏಕೆಂದರೆ ಕಥೆಯಲ್ಲಿ ವಶೀಕರಿಸಿದ ಮನುಷ್ಯನು 7 ತಿಂಗಳವರೆಗೆ ಜೀವಿಸಿರುತ್ತಾನೆ. ಅವನ ಸಾವೂ ಕೂಡ ಪ್ರಯೋಗ ನಡೆಸುವ ವಿಜ್ಞಾನಿಯ ಅಡ್ಡ ಬರುವಿಕೆಯಿಂದ ನಡೆಯುತ್ತದೆ. ಹಾಗಾದಾಗ ವಶೀಕರಣದಿಂದ ಸಾವು ನಿರಂತರವಾಗಿ ಮುಂದೂಡಲ್ಪಡುತ್ತದೆ ಎಂದು ಊಹಿಸಬಹುದಾಗಿದೆ. ಕ್ರಿಯಾತ್ಮಕ ಸಂಕೇತದಿಂದ ಹಿಡಿದು ನಾವು ಇದುವರೆವಿಗೂ ಹುಡುಕಿರುವ ಬೇರೆ ಬೇರೆ ಸಂಕೇತ(code)ಗಳನ್ನು ಕೊನೆಯಲ್ಲಿ ಚರ್ಚಿಸೋಣ. ಕಥೆಯನ್ನು ಪೂರ್ಣ ಪ್ರಮಾಣದಲ್ಲಿ ಸೂಕ್ಷ್ಮವಾಗಿ ವಿಶ್ಲೇಷಿಸುವುದು ಅಸಾಧ್ಯ ಹಾಗೂ ಇದು ತುಂಬಾ ದೀರ್ಘವಾಗುತ್ತದೆ. ಹಾಗಾಗಿ ಕಥೆಯ ಮಧ್ಯಭಾಗದಲ್ಲಿರುವ Lexis ಗಳ ಸಾರಾಂಶವನ್ನು ಕೊಟ್ಟು ಕೊನೆಯ Lexis ಗಳನ್ನು ವಿಶ್ಲೇಷಿಸುತ್ತೇನೆ ಎನ್ನುತ್ತಾನೆ ಬಾರ್ಥ. ಹಾಗಾಗಿ ಪ್ರಮುಖ ಕ್ರಿಯಾನುಕ್ರಮಣಿಕೆಯ ಸಾರಾಂಶವನ್ನು ಕೊಡುತ್ತೇನೆ.

**ಮೊದಲನೆಯ ಹಂತ**

ವ್ಲಾಡಿಮಿರನ ಮೇಲೆ ಮಾಡಲಾಗುವ ಕಾರ್ಯಾಚರಣೆ. ಇದನ್ನು ಮೊದಲು ಬಂದಿರುವ Lexisಗಳಲ್ಲಿ ಹೇಳಲಾಗಿದೆ. ಈ ಹಂತದಲ್ಲಿ ವಶೀಕರಣದ ಪ್ರಯೋಗ ಮಾಡಲು ರೋಗಿಯೊಬ್ಬನನ್ನು ಗುರುತಿಸಲಾಗಿದೆ. ಕಥೆಯ ವಿವರಣೆ ಶುರುವಾಗುವ 9 ತಿಂಗಳ ಹಿಂದೆಯೇ ವ್ಲಾಡಿಮಿರನ ಮೇಲಾಗುವ ಕಾರ್ಯಕ್ರಮ ವನ್ನು ಯೋಜಿಸಲಾಗಿದೆ

.

**ಎರಡನೇ ಹಂತ**

ವ್ಲಾಡಿಮಿರನನ್ನು ಪ್ರಯೋಗದ ವಸ್ತುವಾಗಿ ತೆಗೆದುಕೊಳ್ಳುವುದಕ್ಕೆ ಮುಂಚೆ ವಿಜ್ಞಾನಿಯು ವ್ಲಾಡಿಮಿರನ ವಶೀಕರಣಕ್ಕೆ ಒಳಗಾಗಬಹುದಾದ ಗ್ರಹಣ ಶಕ್ತಿಯನ್ನು ಪರೀಕ್ಷಿಸುತ್ತಾನೆ. ಮೊದಮೊದಲು ವ್ಲಾಡಿಮಿರನು ಆಜ್ಞಾಪಾಲನೆಯಲ್ಲಿ ಪ್ರತಿರೋಧ ಒಡ್ಡಿದರೂ, ಪ್ರಯೋಗದ ಯಶಸ್ಸು ಆಶಾದಾಯಕ ವಾಗಿರುತ್ತದೆ.

**ಮೂರನೇ ಹಂತ**

"ವೈದ್ಯಕೀಯ ಸಾವು" ಕಥೆಯ ಅನುಕ್ರಮಣಿಕೆ ಉದ್ದವಾಗಿದ್ದು, ಈ ಹಂತ ಕಥೆಯನ್ನು ಪೂರ್ಣವಾಗಿ ಆಕ್ರಮಿಸುತ್ತದೆ. ಈ ಕ್ರಿಯಾನುಕ್ರಮಣಿಕೆಯ ಪ್ರಸಂಗಗಳು ಹಲವಾರು. ಆದರೆ ವೈಜ್ಞಾನಿಕವಾಗಿ ತರ್ಕಬದ್ಧವಾದವುಗಳು. ವ್ಲಾಡಿಮಿರನಿಗೆ ಗಂಭೀರ ಖಾಯಿಲೆ, ಪರೀಕ್ಷೆಗಳು, ಸಾವಿನ ತೀರ್ಪು, ಆರೋಗ್ಯದ ದುಸ್ಥಿತಿ, ನೋವು, ಸಾವು. ಈ ಬಿಂದುವಿನಲ್ಲೇ 2 ನೆ ಹಂತದ ಪಠ್ಯ ವಿಶ್ಲೇಷಣೆ-ವಿಘಟನೆ ಮತ್ತು ದ್ರವೀಕರಣ / ಕರಗುವಿಕೆ ಪ್ರಾರಂಭವಾಗುತ್ತದೆ.

(ಮುಂದುವರೆಯುತ್ತದೆ................)

– ಕೆ.ಬಿ.ಜ್ಯೋತಿ

jyogowdev@gmail.com

| ಸೃಜನಶೀಲ | ನಮ್ಮೂರು |
|---|---|

ಅಸ್ತಿತ್ವವಿಲ್ಲ ಹಸಿರು ಕಾನನಗಳು
ಕಣ್ಣಾಯಿಸಿದಷ್ಟು ಕಾಣುವ ಶರಧಿ,
ಬೋರ್ಗರೆದು ಧುಮ್ಮಿಕ್ಕುವ ಜಲಪಾತಗಳು,
ಕಂಡಿದ್ದು ಸಿನಿಮಾಗಳಲ್ಲಿ ನಾವು.
ಇದು ನಮ್ಮೂರು; ಬಯಲು ಸೀಮೆ.
ಸೂರ್ಯ ಸುಡುತ್ತಾನೆ ತನು.
ಕಲ್ಲೆಸೆದು ಗಾಯಗೊಳಿಸಿದ್ದರೂ
ಜಾಲಿ ಗಿಡಗಳೆ ಹೊಟ್ಟೆ ತುಂಬಿಸಿದ್ದು;
ಹೊನ್ನೆ, ಬೀಟೆ, ತೇಗ, ಗಂಧ ತರುಗಳಲ್ಲ.
ಪಾಂಡವರಿಗೆ ನೀರುಣಿಸಿದ
ನಮ್ಮೂರ ದೊಡ್ಡ ಕೆರೆ
ಕೋಡಿ ಬಿದ್ದಿದ್ದು ನಾ ಕಂಡಿಲ್ಲ,
ಕೇಳಿದ್ದೆ ಅಷ್ಟೆ ನಮ್ಮ ಅಜ್ಜನಿಂದ
ಅವ ನೋಡ್ಡಿದ್ದ, ಏಡಿ ಹಿಡಿದಿದ್ದ;
ಏಡಿ ಚಿತ್ರ ಗೂಗಲ್‌ನಲ್ಲಿ ಹುಡುಕಿ
ನಾ ತೃಪ್ತ. ಈ ಸಂಜೆ
ಮಳೆಯೊಂದಿಗೆ ಕರಾರಾಗಿದೆ
ಒಂದೇ ಬೆಳೆ ಬೆಳೆಯಲು.
ಬಿತ್ತಿ ಬೆಳೆಯುತ್ತೇವೆ ಶೇಂಗಾ
ತುಂಗಾ, ಕಾವೇರಿ, ಹೇಮೆಯ
ಒಡಲ ನಂಬಿ ಹೊರಡುತ್ತಾರೆ
ಕುರಿ ಮಂದೆಯ ಜೊತೆ ಗೊಲ್ಲರು.
ನೀರಷ್ಟೇ ಕುಡಿಯುವುದಿಲ್ಲ
ನಾವು, ಜೊತೆಗೆ ಫ್ಲೋರೈಡ್.

–ವೀರೇಂದ್ರ ಯಾದವ್.ಬಿ.ಎಂ
veerendrayadavelt@gmail.com
9844704313

ಪಠ್ಯ ಓದು

# ಪೂರ್ವದ ಕಣ್ಣಲ್ಲಿ ಪಶ್ಚಿಮದ ಓದು: Gis Jen ಳ Tiger Writing



ಚೈನೀಸ್- ಅಮೇರಿಕನ್ ಕಾದಂಬರಿಗಾರ್ತಿ Gis Jen ಅವರ ಇತ್ತೀಚಿನ ಕೃತಿ "Tiger Writing: Art, Culture and the Interdependent Self" ಕೆಲವು ಸ್ವಾರಸ್ಯಕರವಾದ ಸತ್ಯವನ್ನು ಹೇಳುತ್ತಿರುವುದರಿಂದ ಕುತೂಹಲ ಮೂಡಿಸಿದೆ. 'ಸ್ವಯಂ' (self) ಅನ್ನು ವೈಭವೀಕರಿಸಿ ನೈಜ ಜೀವನದಲ್ಲಿ ಕಂಡು ಬರುವ ಪರಸ್ಪರ ಅವಲಂಬನೆ (interdependence) ಯನ್ನು ನಗಣ್ಯವಾಗಿಸುವ ಇಡೀ ಆಂಗ್ಲೋ–ಅಮೇರಿಕಾದ ಆಧುನಿಕ ಸಾಹಿತ್ಯವನ್ನು ಕಟು ವಿಮರ್ಶೆಗೆ ಒಳಪಡಿಸುತ್ತಲೇ ಯೂರೋಪ್ ಜತನದಿಂದ ಕಟ್ಟಿರುವ 'ವ್ಯಕ್ತಿ ಸ್ವಾತಂತ್ರ್ಯ' ವೆಂಬ ಮುದ್ದಾದ ಭ್ರಮೆಯನ್ನು ತನ್ನ ಕೃತಿಯಲ್ಲಿ ಝಾಡಿಸುತ್ತಾಳೆ. ಜೇಮ್ಸ್ ಜಾಯ್ಸ್, ವರ್ಜೀನಿಯಾ ಉಲ್ಫ್, ಮಾರ್ಸೆಲ್ ಪ್ರೌಸ್ಟ್, ಹೀಗೆ ಪ್ರತಿಯೊಬ್ಬರೂ ಸಂಸ್ಕೃತಿ, ಭಾಷೆ, ಕುಟುಂಬದಿಂದ ಹಾಗು ಎಲ್ಲದರಿಂದ ಮುಕ್ತವಾಗಿ ವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿದವರೇ.

ಬಹುಸಂಸ್ಕೃತಿ ಮತ್ತು ಬಹುತ್ವ ಧ್ವನಿಗಳು ಮುಂಚೂಣಿಯಲ್ಲಿರುವ ಇಂದಿನ ವಾಸ್ತವದಲ್ಲಿ 'ಸ್ವಯಂ' ಯೆಂಬುದು ಬದಲಾಗುತ್ತಿರುವುದರ ಲಕ್ಷಣಗಳು ಅಮೇರಿಕಾದಲ್ಲಿನ ಸಾಹಿತ್ಯದ ಸಂಸ್ಕೃತಿ ಮತ್ತು Gis Jen ಬರಹಗಳಲ್ಲಿ ಕಂಡುಬರುತ್ತದೆ. ಪಾಶ್ಚಾತ್ಯ ಕಥನಗಳ ಬಗ್ಗೆ ತೀವ್ರ ಒಲವು ಹೊಂದಿರುವ ಈ ಲೇಖಕಿಗೆ ಕಾದಂಬರಿಯೆಂಬುದು ಪಾಶ್ಚಿಮಾತ್ಯರ ಪ್ರಾಕಾರ. ತನ್ನ ಚೈನಾದ ಬೇರುಗಳಿಗೆ ಹೋಲಿಸಿದರೆ ಪಶ್ಚಿಮದ ಈ ಕಥನ ನಿಧಾನಕ್ಕೆ ತನ್ನ ಆತ್ಮವೇ ಅಂತಿಮ (Narcissistic Solipsism) ಎಂಬ ರೋಗಕ್ಕೆ ತುತ್ತಾಗುತ್ತಿರುವುದನ್ನು ಗಮನಿಸುತ್ತಾಳೆ. ಅವಳ Tiger Writing ಪಶ್ಚಿಮದ ಮತ್ತು ಏಷಿಯನ್ ಕಥನಗಳ ನಡುವಿನ ಈ ವ್ಯತ್ಯಾಸವನ್ನು ತನ್ನ ಸ್ತಿಮಿತತೆ ಕಾಯ್ದುಕೊಳ್ಳುತ್ತಲೇ ವಿಶಿಷ್ಟವಾಗಿ ಗ್ರಹಿಸುತ್ತದೆ. ಪಶ್ಚಿಮದ ಸೌಂದರ್ಯ ಮೀಮಾಂಸೆಯಲ್ಲಿ ವೈಯಕ್ತಿಕ ನೆಲೆಗೆ ನಿಶ್ಚಿತವಾದ ಲಕ್ಷಣಗಳಿವೆ; ಆದರೆ ಅನ್ಯರ ಜೊತೆಗೂಡಿ ಭಾಗವಹಿಸಿ ಬಾಳುವ ಪ್ರಕ್ರಿಯೆಯಲ್ಲಿ ಜಾಗೃತವಾದ ಸ್ವತಂತ್ರ ಭಾವವನ್ನು ತಮ್ಮ ಅಸ್ತಿತ್ವದ ಲಕ್ಷಣವೆಂದು ಪೌರಾತ್ಯರು ಭಾವಿಸುತ್ತಾರೆ. ವೈಯಕ್ತಿಕತೆಯು ಪೂರ್ವದಿಂದ ಪಶ್ಚಿಮಕ್ಕೆ ಪ್ರಯಾಣಿಸುತ್ತಲೇ ದಟ್ಟವಾಗುತ್ತದೆ. ಥಾಮಸ್ ಮನ್ ತನ್ನ ಎಲ್ಲಾ ಬರವಣಿಗೆಯು ಮಧ್ಯಮ ವರ್ಗದಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಎಂಬ ಹೇಳಿಕೆಯನ್ನು Gis Jen ಉಲ್ಲೇಖಿಸುತ್ತಲೇ ಎಲ್ಲಾ ಆಧುನಿಕ ಸಾಹಿತ್ಯದ ಮುಖ್ಯ ಉದ್ದೇಶ ಮಧ್ಯಮ ವರ್ಗದೊಂದಿಗಿನ ಸಂಘರ್ಷವೇ ಆಗಿದೆಯೆಂದು ವಿಶ್ಲೇಷಿಸುತ್ತಾಳೆ. ಜಾನ್ ಉಪ್ಡೈಕ್ 'ಪ್ರಪಂಚದೊಂದಿಗಿನ ಉಜ್ವಲ ಸಂಬಂಧ'ವೇ ಎಲ್ಲಾ ಸಾಹಿತ್ಯದ ಶ್ರೇಷ್ಠತೆಯ ಮಾಪನ ಎನ್ನುವ ಮಾತನ್ನು ಒಪ್ಪುವ ಜೆನ್ ಮಧ್ಯಮವರ್ಗದ ಬಿಳಿಯರ ಬೌದ್ಧಿಕ ಪರಂಪರೆಯಲ್ಲಿ ಕಲೆ, ಸಂಸ್ಕೃತಿ ಮತ್ತು ವೈಯಕ್ತಿಕತೆ ಹೇಗೆ ರೂಪುಗೊಂಡಿವೆ ಎಂದು ವಿಚಾರಮಾಡುತ್ತಾಳೆ.

ಕಾವ್ಯಕ್ಕೆ ಒಂದು ವಿಶಿಷ್ಟವಾದ ಭಂಡತನವಿರುತ್ತದೆ, ಅದು ಕಲ್ಪಿತ ಕಥನಗಳಿಗೂ ಅನ್ವಯಿಸುತ್ತದೆ. ನಮ್ಮ ಅಂತರಂಗದಲ್ಲಿರುವ, ಆದರೆ ನಮಗೇ ಗೊತ್ತಿರದ ವಿಷಯಗಳು ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಧುತ್ತೆಂದು ಕತ್ತಲಿನಿಂದ ಎಗರಿ ಬಾಲ ಆಡಿಸುತ್ತಾ ಬೆಳಕಿನಲ್ಲಿ ನಿಲ್ಲುವ ಹುಲಿಯಂತೆ ನಮ್ಮ ಅರಿವಿಗೆ ಬರುತ್ತವೆ. ಭಾಷೆಯ ಶಕ್ತಿ ಇರುವುದೇ ಈ ವಿಸ್ಮಯದ ಅನಾವರಣದಲ್ಲಿ. ತೀಕ್ಷ್ಣವಾದ ವಿಮರ್ಶಾ ಪ್ರಜ್ಞೆಯಿರುವ Gis Jen ಳ Tiger Writing ಕೃತಿಯಲ್ಲಿ ಭಾಷೆ ತೆರೆದಿಡುವ ಅಚ್ಚರಿ ನಮ್ಮನ್ನು ಎದುರಾಗದೆ ಇರಲಾರದು.

ಕೃಪೆ: Gis Jen ಅವರ ಇತ್ತೀಚಿನ ಕೃತಿ "Tiger Writing: Art, Culture and the Interdependent Self" ಗೆ ಮುರಳಿ ಶಿವರಾಮಕೃಷ್ಣನ್, ಪಾಂಡಿಚೆರಿ ವಿಶ್ವವಿದ್ಯಾಲಯ, ಅವರು ಬರೆದಿರುವ ಪುಸ್ತಕ ವಿಮರ್ಶೆ, "ದಿ ಹಿಂದು" ಪತ್ರಿಕೆ, ಮಾರ್ಚ 12, 2013.

ಮನುಷ್ಯರು ಕೇವಲ ತಮ್ಮ ಅವಶ್ಯಕತೆಗಳ ಬಗ್ಗೆ ಚಿಂತಿಸುತ್ತಾರೆಯೇ ಹೊರತು, ಅದನ್ನು ಪೂರೈಸಿಕೊಳ್ಳಲು ತಮಗಿರುವ ಸಾಮರ್ಥ್ಯಗಳನ್ನಲ್ಲ – ನೆಪೋಲಿಯನ್ ಬೋನಾಪಾರ್ಟೆ

ಜೀವನ ಲಹರಿ

# ರೂಪಾಂತರ - ಪರಿವರ್ತನೆ

ಇಂದು ಸಾಕ್ಷರತೆ-ಶಿಕ್ಷಣ ಹೆಚ್ಚುತ್ತಿದೆ. ಸಮೂಹ ಮಾಧ್ಯಮಗಳು ಜನಮಾನಸದ ಮೇಲೆ ಪ್ರಭಾವ ಬೀರುತ್ತಿವೆ. ಬಾಹ್ಯ ರೂಪಾಂತರಗಳೇ ಅಂತರಿಕ ಪರಿವರ್ತನೆಗಳಿಗಿಂತ ಶ್ರೇಷ್ಠ ಎಂದು ಬಿಂಬಿಸಲಾಗುತ್ತಿದೆ. ಸ್ನೇಹ-ಸೌಹಾರ್ದ, ಸಹಬಾಳ್ವೆಯ, ಶಾಂತಿ ಸಮಾಧಾನದ ಬದುಕು ಅರಳುತ್ತಿಲ್ಲ. ದೌರ್ಜನ್ಯ ಮತಾಂಧತೆ, ಹಿಂಸೆ, ಭ್ರಷ್ಟತೆ, ಅವಕಾಶವಾದ, ಪಕ್ಷಪಾತ; ರಾಷ್ಟ್ರ ಸಂಪತ್ತಿನ ಲೂಟಿ, ಪ್ರಕೃತಿ ವಿಕೋಪ, ಕ್ಷಾಮ-ಡಾಮರ, ಕಲುಷಿತವಾಗುತ್ತಿರುವ ಗಾಳಿ ನೀರು ಹೀಗೆ ಸಂಕಷ್ಟಗಳ ಸರಮಾಲೆ ಬೆಳೆಯುತ್ತಿದೆ. 60 ವರ್ಷಗಳ ಪ್ರಜಾಪ್ರಭುತ್ವದ ಫಲ ಆಶಾದಾಯಕವಾಗಿಲ್ಲ. ಇದಕ್ಕೆ ರಾಜಕಾರಣ, ಪ್ರಾದೇಶಿಕತೆ, ಅಧಿಕಾರಿ ವರ್ಗ, ಪಕ್ಷ, ಪಂಥಗಳನ್ನು ಹೊಣೆಗಾರರನ್ನಾಗಿ ಮಾಡಿ ಆಕ್ಷೇಪಿಸುವುದರಿಂದ ಪ್ರಯೋಜನವಿಲ್ಲ. ಈ ಸಂಕಷ್ಟಗಳಿಗೆ ಕಾರಣವಾಗಿರುವವನೂ ಮನುಜನೇ. ಒಬ್ಬೊಬ್ಬ ವ್ಯಕ್ತಿಯೂ ಸೇರಿ ಸಮಷ್ಟಿಯಾಗಿರುವುದರಿಂದ ವ್ಯಕ್ತಿಮಟ್ಟದಲ್ಲಿ ಪರಿವರ್ತನೆಯಾದಾಗ ಮಾತ್ರ ಪ್ರಜಾಪ್ರಭುತ್ವದ ಸಫಲತೆಯಾಗುತ್ತದೆ. ಎಷ್ಟೇ ಮಿತಿಗಳಿದ್ದರೂ ನಾಗರಿಕತೆಯ ಗತಿ ಪ್ರಗತಿಶೀಲ. ಇಲ್ಲಿ ರೂಪಾಂತರವೂ ಇದೆ, ಪರಿವರ್ತನೆಯೂ ಇದೆ. ಆಯ್ಕೆ ಜವಾಬ್ದಾರಿಯುತವಾಗಿರಬೇಕು.

ರೂಪಾಂತರ ನೈಸರ್ಗಿಕ, ಸರಳ, ಸುಲಭ, ಬಾಹ್ಯ ಬೀಜದ ಸಂಪರ್ಕ ಜೀವಜಾಲ ಬೆಳೆಸುವ ಪ್ರಕ್ರಿಯೆಯಂತೆ; ಮಾವಿನ ಹೂವು ಕಹಿ, ಕಾಯಿ ಒಗರು - ಹುಳಿ, ಹಣ್ಣಾಗಿ ಸಿಹಿ ಮಾಧುರ್ಯ. ಕಂಬಳಿಹುಳು ಕೋಶ ಸೇರಿ ಚಿಟ್ಟೆಯಾಗುವ ರಂಗುರಂಗಿನ ಸೊಬಗು. ಕಾಯ್ದು ಆವಿಯಾದ ತೇವಾಂಶ ಮೋಡವಾಗಿ ಮಳೆಯಾಗಿ, ಜುಳು-ಜುಳು ಲಯಧಾರೆ ನದಿಯಾಗಿ ಸಮುದ್ರ ಸೇರುವ ವಿವಿಧ ಮಜಲುಗಳೇ ರೂಪಾಂತರ. ಮಳೆ ಹನಿಯನ್ನು ಸೂರ್ಯ ರಶ್ಮಿಯು ಹಾಯ್ದು ಕಾಮನಬಿಲ್ಲಾಗುವ ದೃಶ್ಯ ವೈಭವ. ಸೂರ್ಯನ ಕಿರಣದ ಶಾಖ ಚಂದ್ರನ ಮೇಲೆ ಬಿದ್ದು ತಂಪಾಗುವ ಆಹ್ಲಾದ. ಅರಳಿದ ಹೂವಿನ ಸುಗಂಧ. ಹೀಗೆ ಅನೇಕ ರೂಪಾಂತರಗಳನ್ನು ನಿಸರ್ಗದಲ್ಲಿ ಗಮನಿಸಬಹುದು. ರೂಪಾಂತರ ಬಾಹ್ಯವಾದುದ್ದರಿಂದ ಸುಲಭ ಗ್ರಾಹ್ಯ ಹಾಗೆಯೇ ಸುಂದರ.

ಆದರೆ ಪರಿವರ್ತನೆ ಸುಲಭ ಅಲ್ಲ ಅದಕ್ಕೆ ಇಚ್ಛಾಶಕ್ತಿ ಬೇಕು. ಸನ್ನಿವೇಶವೂ ಒದಗಿ ಬರಬೇಕು. ಇದು ಕೇವಲ ರೂಪಾಂತರವಲ್ಲ, ಮನುಷ್ಯ ದಕ್ಕಿಸಿಕೊಳ್ಳಬೇಕಾದ ವಿಶಿಷ್ಟ ಲಕ್ಷಣ. ಜಿ.ವಿ. ಅಯ್ಯರ್ ಅವರ ರೂಪದರ್ಶಿ ಕಾದಂಬರಿಯಲ್ಲಿ ರೂಪಾಂತರ ಮತ್ತು ಪರಿವರ್ತನೆಯ ವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ನಿರೂಪಿಸಿದ್ದಾರೆ. ಈ ಕಾದಂಬರಿಯಲ್ಲಿ ಲಿಯಾನಾರ್ಡೋ ಡಾ ವಿಂಚಿಯು ಏಸು ಕ್ರಿಸ್ತನ ಜೀವನ ಚರಿತ್ರೆಯನ್ನು ಚಿತ್ರಿಸುವಾಗ ಬಾಲಕ ಏಸುವಿನ ಚಿತ್ರಕ್ಕೆ ಅರ್ನೆಸ್ಟ್ ಎಂಬ ಪುಟ್ಟ, ಮುಗ್ಧ, ಮನಮೋಹಕ ಸುಂದರ ಬಾಲಕನನ್ನು ಮಾದರಿಯಾಗಿಟ್ಟು ಕೊಳ್ಳುತ್ತಾನೆ. ಕಾಲಾನಂತರದಲ್ಲಿ ಏಸುವಿನ ಅಂತ್ಯದ ದಿನಗಳನ್ನು ಚಿತ್ರಿಸುವಾಗ ಏಸುವನ್ನು ಗುರುತಿಸಲು ಸಾಕ್ಷಿ ಹೇಳಿದ್ದ ಜುದಾಸ್ ನ ಚಿತ್ರದ ಮಾದರಿಗೆ ಸೂಕ್ತ ವ್ಯಕ್ತಿಯಾಗಿ ಮೈಖೆಲ್ ಎಂಬುವನನ್ನು ಕಲಾವಿದ ಹಿಡಿದು ತರುತ್ತಾನೆ. ಆತ ಒರಟ, ಕ್ರೂರಿ, ವಿಕಾರ ರೂಪವುಳ್ಳವನು. ಹಣದ ಆಮಿಷ ಒಡ್ಡಿ ಮಾದರಿಯಾಗಿರಲು ಒಪ್ಪಿಸಿ, ಅಟ್ಟಣಿಗೆಯ ಮೇಲೆ ಕೂರಿಸಿ ಕಲಾವಿದ ಚಿತ್ರ ಬಿಡಿಸುತ್ತಿರುತ್ತಾನೆ. ಮೈಖೆಲ್ ಕಲಾವಿದ ಬಿಡಿಸಿರುವ ಬಾಲಕ ಏಸುವಿನ ಚಿತ್ರಗಳನ್ನು ನೋಡುತ್ತಲೇ ತಲೆ ತಿರುಗಿ ಪ್ರಜ್ಞೆ ತಪ್ಪಿ ಅಟ್ಟಣಿಗೆಯಿಂದ ಬೀಳುತ್ತಾನೆ. ಕಲಾವಿದ; ಮೈಖೆಲ್ ನಿಗೆ ಉಪಚರಿಸಿ ವಿಚಾರಿಸಿದಾಗ ಬಾಲಕ ಏಸುವಿನ ಚಿತ್ರಕ್ಕೆ ಮಾದರಿಯಾಗಿದ್ದ ಅರ್ನೆಸ್ಟ್ ತಾನೇ ಎಂದು ಹೇಳುತ್ತಾನೆ. ಸಮಾಜದ ಕೌರ್ಯ ತನ್ನನ್ನು ದುಷ್ಟನನ್ನಾಗಿ ರೂಪಾಂತರಿಸಿರುವ ಸಂಗತಿಗಳು ಅವನ ಅರಿವಿಗೆ ಬರುತ್ತವೆ. ಮೈಖೆಲ್‌ನ ಬಾಹ್ಯದ ಆಕಾರ ವಿಕಾರವಾಗಿ ರೂಪಾಂತರಗೊಂಡಿದೆ. ಅನ್ಯರ ಸುಳಿಗೆ ಸಿಕ್ಕಿ ರೂಪಗೊಂಡ ತನ್ನ ಸ್ವಭಾವ ಆಲೋಚನೆಗಳು ತನ್ನವಲ್ಲ ಎಂದು ಅನಿಸಿದ ಆಕ್ಷಣದ ತಲ್ಲಣದಲ್ಲಿ ಮೈಖೆಲ್‌ನ ಪರಿವರ್ತನೆಯಿದೆ. ತನ್ನ ಬಾಹ್ಯದ ರೂಪದ ವಿಕಾರಕ್ಕಿಂತಲೂ ತನ್ನ ಸ್ವಭಾವದಲ್ಲಿ ಆಗಿರುವ ಮತ್ತು ಆಗುತ್ತಿರುವ ಪರಿವರ್ತನೆ ಆತನಲ್ಲಿ

ದಿಗ್ಭ್ರಮೆ ಆತಂಕ; ಆಘಾತ ಉಂಟು ಮಾಡಿದೆ. ಇಂತಹ ಅಪರೂಪದ ಕ್ಷಣಗಳೇ ಅಸುರೀ ಶಕ್ತಿಯನ್ನು ಮಾನವೀಯವಾಗಿಸುತ್ತವೆ.

ಅನುಕರಣೆ ರೂಪಾಂತರ ಅಲ್ಲ. ಸಂಪ್ರದಾಯಗಳಿಂದ, ದುಷ್ಟ ವ್ಯವಸ್ಥೆಗಳಿಂದ ರೂಢಿಸಿಕೊಂಡ ಗುಣಗಳು ಮುಖವಾಡಗಳು, ಪರಿವರ್ತನೆ ಅಲ್ಲ. ಸೃಷ್ಟಿಯಲ್ಲಿ ಹಗಲು-ರಾತ್ರಿ, ಕತ್ತಲೆ-ಬೆಳಕು, ಸಿಹಿ-ಕಹಿ, ಒಳ್ಳೆಯದು-ಕೆಟ್ಟದ್ದು, ಬೇಕು-ಬೇಡಗಳೆರಡೂ ಇವೆ. ಆಯ್ಕೆ ನಮ್ಮದು. ಹೂವಿನ ಮೌನ ಆಹ್ಲಾದತೆ, ಸ್ಮಶಾನದ ಮೌನ ನಿರ್ಜೀವತೆ, ರಾತ್ರಿಯ ಮೌನ ಗಾಢಾಂಧಕಾರತೆ. ಹಾಗೆಯೇ ಏಕಾಂತದ ಮೌನದಲ್ಲಿ ಪರಿವರ್ತನೆಯ ಸಾಧ್ಯತೆಗಳಿವೆ.

ಪ್ರಸ್ತುತ ಆಗಬೇಕಾಗಿರುವುದು ನಿಷೇಧಾತ್ಮಕತೆಯನ್ನು ವಿಧಾಯತ್ಮಕವಾಗಿ, ಅಂಧಕಾರವನ್ನು ಪ್ರಕಾಶವನ್ನಾಗಿ, ಅವ್ಯಕ್ತ ಭೀತಿಯಿಂದ ಕಂಪಿಸುತ್ತಿರುವವರನ್ನು ನಿರ್ಭಯರನ್ನಾಗಿ ಪರಿವರ್ತಿಸುವ ವ್ಯವಸ್ಥೆಯನ್ನು ಸೃಷ್ಟಿಸಿಕೊಳ್ಳುವ ಅವಕಾಶಗಳು. ಪರಿವರ್ತನೆ ಆಂತರಿಕವಾಗಿ ಜೈವಿಕವಾಗಿರಬೇಕು. ಇಲ್ಲದಿದ್ದರೆ ಅದು ಕೃತಕ. ಅನ್ಯೋನ್ಯವಾಗಿ ಸುಖ ಸಂತೋಷದಿಂದ ನಿರ್ಭೀತರಾಗಿ ಸ್ವಾವಲಂಬಿಗಳಾಗಿ ಪರಿವರ್ತನೆಯಾದ ಪ್ರಜೆಗಳು ಮಾತ್ರವೇ ಪ್ರಜಾಪ್ರಭುತ್ವ ವ್ಯವಸ್ಥೆಗೆ ಅರ್ಹರು.

- ಕೆ.ಆರ್.ಬಸವರಾಜು
9481492481

## ಪ್ರೇಮತತ್ವ

ನದಿಯನ್ನು ಸೇರುವುವು ಹಳ್ಳ ಕೊಳ್ಳಗಳು,
ನದಿ ಹರಿದು ಸೇರುವುದು ಸಾಗರದೊಳು.
ಸವಿಭಾವ ಲಹರಿಯೊಳು ಆಗಸದ ತಂಗಾಳಿ
ಬೆರೆಯುವುದು ಕಾಲದ ಮಿತಿಯ ಮೀರಿ.

ಯಾವುದೂ ಏಕಾಂಗಿಯಲ್ಲವೀ ಜಗದಲ್ಲಿ,
ವಿಧಿಯೆಂಬ ದಿವ್ಯ ಲೀಲೆಯ ಕೈಯಲ್ಲಿ.
ಎಲ್ಲವೂ ಕೂಡುವುವು ಒಂದರೊಳಗೊಂದೊಂದು,
ಇರಲಾರದೆಯೆ ಅಗಲಿ ಒಂದ ಮತ್ತೊಂದು.

ಜಗದ ವಿಧಿ ಹೀಗೆಯೆ ಇರುವಾಗ ನನ್ನೊಲವೆ,
ನಾ ದೂರ ಏಕಿರಲಿ
ನಿನ್ನ ಅಗಲಿ?

ಎಲೆ ಚೆಲುವೆ ನೋಡು ನೀ ಕಾರ್ಮುಗಿಲ ಗಗನವನು,
ಗಿರಿ ಶಿಖರಗಳು ಅದನು ಮುತ್ತಿಡುವ ಬಗೆಯನ್ನು,
ವೈಯ್ಯಾರಿ ಹೂವೊಂದು ಬೆಡಗು ಬಿನ್ನಾಣದಲಿ,
ತನ್ನನುಜೆಯನು ಜರಿಯೆ ಮೆಚ್ಚಲಾದೀತೇನು?

ದಿನಕರನ ದಿವ್ಯ ಪ್ರಭೆ ಧಾರಿಣಿಯ ಮುದ್ದಿಸಲು;
ತಿಂಗಳೊಡೆಯನ ಹೊಳಪು ಸಾಗರಿಯ ಮೋಹಿಸಲು;
ಒಂದೊಂದು ನೀರ ತೆರೆ ತೀರಕಪ್ಪಳಿಸುತ್ತ,
ಬಿಗಿದಪ್ಪಿ ಮತ್ತೊಂದ ನೀಡುವುದು ಸಿಹಿಮುತ್ತ.

ನೀ ಕೂಡ ಹೀಗೆನ್ನ ಚುಂಬಿಸದಿರೆ ಒಲವೆ,
ಯಾವ ಫಲವಿಹುದಲ್ಲಿ
ಯಾರೆಷ್ಟೆ ಮುತ್ತುಗಳ ಹರಿಸುತಿರೆ ಅಲ್ಲಿ?

(ಪಿ ಬಿ ಶೆಲ್ಲಿ ಅವರ **'Love's Philosophy'** ಕವನದ ಅನುವಾದ)

- ಸಿದ್ಧರಾಮಯ್ಯ ಡಿ ಎಂ
kalpasahyadri@gmail.com

ಸ್ನೇಹಿತರಲ್ಲೆಲ್ಲಾ ಅತ್ಯಂತ ಒಳ್ಳೆಯದೆಂದರೆ ಒಳ್ಳೆಯ ಪುಸ್ತಕ: ಇಂದಿಗೂ, ಎಂದಿಗೂ.
- Tupper

# ನೋಮ್ ಚಾಮ್ಸ್ಕಿ : ಭಾಷೆ ಮತ್ತು ಸ್ವಾತಂತ್ರ್ಯ

[ನೋಮ್ ಚಾಮ್ಸ್ಕಿ ಇಪತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ತನ್ನ ಪ್ರಬುದ್ಧ ಬೌದ್ಧಿಕ ಚಿಂತನೆಗಳಿಂದಾಗಿ ಪರಿಚಿತನಾದ ಭಾಷಾಶಾಸ್ತ್ರಜ್ಞ. ಸಹಜ ಶೈಲಿ, ಸಮೃದ್ಧ ಆಧಾರಗಳು, ಪ್ರಖರ ವಿಶ್ಲೇಷಣೆಗಳಿಂದ ರಾಜ್ಯಸ್ಥಾಪಿತ ತತ್ವಗಳನ್ನು ಪ್ರಶ್ನಿಸುತ್ತಲೇ ಮಾನವರ ಮೂಲ ಪ್ರಕೃತಿಗಳಾದ ಸೃಜನಶೀಲತೆ ಮತ್ತು ಸ್ವಾತಂತ್ರ್ಯವನ್ನು ತನ್ನ ಬರಹಗಳಲ್ಲಿ ಎತ್ತಿಹಿಡಿದವನು. ಸಾಮಾನ್ಯ ಓದುಗನನ್ನು ಚಾಮ್ಸ್ಕಿ ಸಮಾಜೋ–ಆರ್ಥಿಕ ವಿಶ್ಲೇಷಕನಾಗಿ ಎದುರಾಗುತ್ತಾನೆಯೇ ಹೊರತು ಭಾಷಾಶಾಸ್ತ್ರಜ್ಞನಾಗಿ ಅಲ್ಲ.

1957ರಲ್ಲಿ ಪ್ರಕಟವಾದ ಅವನ ಕಿರುಹೊತ್ತಿಗೆ *'Syntactic Structures'* ಭಾಷಾಶಾಸ್ತ್ರ ಮತ್ತು ಸಂಬಂಧಿತ ಕ್ಷೇತ್ರಗಳಲ್ಲಿ ಸಂಚಲನ ಉಂಟುಮಾಡಿತು. ಚಾಮ್ಸ್ಕಿಯನ್ ಕ್ರಾಂತಿಗೆ ನಾಂದಿಹಾಡಿತು. 1965ರಲ್ಲಿ 'ಪ್ರಮಾಣಗ್ರಂಥ' ವೆಂದು ಹೆಸರು ಮಾಡಿರುವ ಆತನ ಏಕವಿಷಯ ಪ್ರಬಂಧ (monograph) *'Aspects of the Theory of Syntax'*ನಲ್ಲಿ ಭಾಷೆಯನ್ನು ಕುರಿತ ಅವನ ವಿಚಾರಗಳು ಹುಟ್ಟುಹಾಕಿರುವ ಅಂತರ್‌ಶಿಸ್ತೀಯ ಚರ್ಚೆಗಳು ಇವತ್ತಿಗೂ ಕಲಿತವರ ವಲಯದಲ್ಲಿ ಹರಿದಾಡುತ್ತಿವೆ.

ಕೈಗಾರಿಕಾ ಸಮಾಜವ್ಯವಸ್ಥೆಯ ನಂತರ ಬರುವ ಹಂತವೇ ಚಾಮ್ಸ್ಕಿ ಕರೆಯುವ 'ಪ್ರಜಾಪ್ರಭುತ್ವವಾದಿ ಸಮಾಜವಾದ'. ಇದು ವೈಯುಕ್ತಿಕ ಹಕ್ಕುಗಳಿಗೆ ಅಭಯ ನೀಡುವ ಸ್ವಾತಂತ್ರ್ಯ, ಆಯ್ಕೆ ಮತ್ತು ಗೇಯ್ಮೆಯ ತಳಹದಿಯ ಮೇಲೆ ನಿಂತಿರುತ್ತದೆ. ಈ ಚಿಂತನೆಯ ಮೂಲವನ್ನು (19ನೇ ಶತಮಾನದ ಅಂಚಿಗೆ ಕಂಡು ಬಂದ ವಸ್ತುವಾದಿ–ಅನುಭವವಾದಿ –ಚರ್ಯಾಮೂಲ (materialist-empiricist-behaviouristic) ತತ್ವ ಚಿಂತನೆ ಬರುವ ತನಕ) ಒಂದು ಶತಮಾನದಷ್ಟು ದೀರ್ಘ ಅವಧಿಗೆ ತಮ್ಮ ಕಾಲವನ್ನು ಪ್ರಭಾವಿಸಿದ Schelling, Rousseau, Kant, Descartes ಮತ್ತು ಅವರ ಅನುಯಾಯಿಗಳಾದ Cordemoy, Wilhelm von Humboldt ರ ತಾತ್ವಿಕ ಚಿಂತನೆಗಳಲ್ಲಿ ಕಾಣಬಹುದು..

ಪ್ರಜ್ಞೆ, ವಿವೇಕ, ಬುದ್ಧಿ ಮತ್ತು ಸ್ವಾತಂತ್ರ್ಯ – ಇವು ಮಾನವರ ಸಹಜ ಪ್ರಕೃತಿ. ಒಂದಕ್ಕೊಂದು ಪೂರಕ ಮತ್ತು ಪರಸ್ಪರ ಅವಲಂಬಿತ. Humboldt ಪ್ರಕಾರ ಭಾಷೆ ಮುಕ್ತ ಸೃಷ್ಟಿಯ ಪ್ರಕ್ರಿಯೆ ಹಾಗು ಕಲಿಕೆಯೊಂದು ನೆನಪರಿಕೆ. ಅನುಭವಗಳಿಂದ ಪ್ರಚೋದನೆಗೊಂಡಾಗ ತನ್ನ ಆಂತರಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಮುನ್ನಡೆಯುವ ಹಾದಿ. ಅವಶ್ಯಕತೆ ಮತ್ತು ಸ್ವಾತಂತ್ರ್ಯ, ನಿಯಮ ಮತ್ತು ಆಯ್ಕೆ, ಸ್ಥಾಪಿತ ಶೈಲಿ/ನಿರ್ಬಂಧ ಹಾಗು ಸೃಜನಶೀಲತೆ ಮಾನವ ಪ್ರಕೃತಿಯ ಸ್ಥಿತಿಗಳು. ಮಾನವನ ಮಾನಸಿಕ ರಚನೆಯ ಮಾದರಿ ನಮೂನೆಯನ್ನು, ನಿಯಮ ರೂಪಿತ ನಡವಳಿಕೆ ಮತ್ತು ಮುಕ್ತ ಸೃಷ್ಟಿಯ ನಿದರ್ಶನವನ್ನು ಭಾಷೆಯಲ್ಲಿ ಕಾಣಬಹುದೆಂದು Humboldt ಅಭಿಪ್ರಾಯ ಪಡುತ್ತಾನೆ.

1970ರಲ್ಲಿ ಶಿಕಾಗೋದಲ್ಲಿನ ಲಯೋಲಾ ವಿಶ್ವವಿದ್ಯಾನಿಲಯದಲ್ಲಿ ಆಯೋಜಿಸಲಾಗಿದ್ದ ಸ್ವಾತಂತ್ರ್ಯ ಮತ್ತು ಮಾನವ ವಿಜ್ಞಾನ ವಿಚಾರಗೋಷ್ಠಿಯಲ್ಲಿ ಭಾಷೆಯ ಪ್ರಕೃತಿಗೂ ಸ್ವಾತಂತ್ರ್ಯಕ್ಕೂ ಭಾಷಾಶಾಸ್ತ್ರದ ನೆಲೆಯಲ್ಲಿ ಇರುವ ಸಂಬಂಧವನ್ನು ಕುರಿತಂತೆ ನೋಮ್ ಚಾಮ್ಸ್ಕಿ ಮಾಡಿದ ಅಪರೂಪದ ಭಾಷಣವನ್ನು ಅನುವಾದಿಸಲಾಗಿದೆ.]

–1–

ಭಾಷೆ ಮತ್ತು ಸ್ವಾತಂತ್ರ್ಯ ಹೇಗೆ ಒಂದಕ್ಕೊಂದು ಸಂಬಂಧಿಸಿವೆ ಎಂಬ ವಿಚಾರವೇ ನಾಜೂಕಾದದ್ದು. ನನ್ನ ವೃತ್ತಿಪರ ಜೀವನದ ಬಹುಭಾಗ ಭಾಷೆಯ ಅಧ್ಯಯನಕ್ಕೆ ಮೀಸಲಾಗಿದೆ. ಹಾಗಾಗಿ ಭಾಷೆಯನ್ನು ಕುರಿತಂತೆ ನಿರರ್ಗಳವಾಗಿ ಮಾತನಾಡಬಲ್ಲೆ. ಹಾಗೆಯೇ 20ನೇ ಶತಮಾನದ ಮಧ್ಯಭಾಗದಲ್ಲಿ ಸ್ವಾತಂತ್ರ್ಯ ಮತ್ತು ಬಿಡುಗಡೆಯ ಸಮಸ್ಯೆಯನ್ನು ಕುರಿತಂತೆಯೂ ಕೂಡ ಸಾಕಷ್ಟು ಹೇಳುವುದಿದೆ. ಆದರೆ 'ಭಾಷೆ ಮತ್ತು ಸ್ವಾತಂತ್ರ್ಯ' ದ ನಡುವಿನ ಅಂತರ್‌ಸಂಬಂಧ ಯಾವ ರೀತಿಯದು?

ಸಮಕಾಲೀನ ಭಾಷಾ ಅಧ್ಯಯನದಲ್ಲಿ ಭಾಷಾ ಲಕ್ಷಣ ಮತ್ತು ಭಾಷಾ ಬಳಕೆಯನ್ನು ಕುರಿತಂತೆ.

ಬದುಕಿರುವಾಗ ಬದುಕಿನ ಸುಖ ಅನುಭವಿಸಬೇಕು; ಸಾವಿನ ಅಂಜಿಕೆ ಇದ್ದರೆ ಬದುಕಿನ ಸುಖವೂ ಮರೆಯಾಗುತ್ತದೆ.
– ಎಪಿಕ್ಯೂರಸ್.

ಪರಿಣಾಮಕಾರಿ ಸೈದ್ಧಾಂತಿಕ ಅಧ್ಯಯನಗಳು ವಿರಳ. ನಿರ್ದಿಷ್ಟವಾಗಿ ಹೇಳುವುದಾದರೆ, ನಮ್ಮ ಆಳವಾದ ಒಳನೋಟಗಳು ಕಂಡುಬರುವುದು ರೂಢಿಗತವಾಗಿ ಅನುಸರಿಸುವ ವ್ಯಾಕರಣ ರಚನೆಗಳ ಬಗ್ಗೆ. ಭಾಷೆ ತಿಳಿದಿರುವ ಯಾವುದೇ ವ್ಯಕ್ತಿ ಆ ಭಾಷೆಗೆ ಸಂಬಂಧಿಸಿದ ನಿಯಮ ಮತ್ತು ಸೂತ್ರಗಳ ವ್ಯವಸ್ಥೆಯನ್ನು ತನ್ನದಾಗಿಸಿಕೊಂಡಿರುತ್ತಾನೆ. ಇದನ್ನೇ ತಾಂತ್ರಿಕ ಪರಿಭಾಷೆಯಲ್ಲಿ "Generative Grammar," ಎನ್ನುತ್ತೇವೆ. ಈ ನಿಯಮ, ಸೂತ್ರಗಳು ಶಬ್ಧ ಮತ್ತು ಅರ್ಥವನ್ನು ನಿಶ್ಚಿತ ರೀತಿಯಲ್ಲಿ ಸಂಯೋಜಿಸುತ್ತವೆ. ಪ್ರತಿಯೊಂದು ಭಾಷೆಗೂ ಇರುವ ಇಂಥಾ ವಿಶೇಷ ಸಂಯೋಜನೆಗಳ ವ್ಯಾಕರಣವನ್ನು ಕುರಿತಂತೆ ಬೆಳಕು ಬೀರುವ ಅಧ್ಯಯನಗಳು ನಡೆದಿವೆ, ನಡೆಯುತ್ತಿವೆ.

ಇತ್ತೀಚಿಗೆ ಯಾವ ಭಾಷೆಗಳನ್ನು ಮಾನವರು ಸಹಜವಾಗಿ ಕಲಿಯಬಲ್ಲರೋ ಅಂತಹ ಭಾಷೆಗಳ ಸಾಮಾನ್ಯ ಅಂಶಗಳನ್ನು ವಿವರಿಸುವ ನಿಯಮ ಹಾಗು ಸೂತ್ರಗಳ ಬಗ್ಗೆಗಿನ ತಿಳುವಳಿಕೆ ಹೆಚ್ಚಾಗುತ್ತಿದೆ. "Universal grammar" ಬಗ್ಗೆ ಗಮನಾರ್ಹವಾದ ಆಸಕ್ತಿ ಕಂಡು ಬರುತ್ತಿದೆ. ಈ ವ್ಯಾಕರಣವನ್ನು ಮಾನವ ಪ್ರಜ್ಞೆಯ ಅವಶ್ಯಕ ಭಾಗವಾದ ಸಹಜ ಶಕ್ತಿಯೆಂದು ತಿಳಿಯುವುದು ಸರಿಯಾದ ಕ್ರಮವಾಗುತ್ತದೆ. ಸಾರ್ವತ್ರಿಕ ವ್ಯಾಕರಣದ ತಾತ್ವಿಕತೆಯು ಶ್ರೀಮಂತವಾಗಿದ್ದು, ಅಮೂರ್ತತೆ ಮತ್ತು ನಿಗ್ರಹವನ್ನು ಹೊಂದಿದೆಯೆಂಬ ತಿಳುವಳಿಕೆಯು ತೀವ್ರ ಕುತೂಹಲವನ್ನು ಹುಟ್ಟಿಸಿದೆ ; ಹಾಗಾಗಿಯೇ ಇದರ ಸಹಾಯದಿಂದ ಜೀವನದ ವೈವಿಧ್ಯಮಯ ಅನುಭವಗಳಿಗೆ ತಾತ್ವಿಕ ವಿವರಣೆಗಳನ್ನು ಕಟ್ಟಿಕೊಳ್ಳಬಹುದಾಗಿದೆ.

ಪ್ರಸ್ತುತ ನಮ್ಮ ತಿಳುವಳಿಕೆಯ ಹಂತದಲ್ಲಿ, ಮಾನವ ಪ್ರಕೃತಿಯ ಸಮಸ್ಯೆಗಳನ್ನು ಅನ್ವೇಷಿಸಲು ಭಾಷೆಯು ಚಿಮ್ಮುಹಲಗೆಯಾಗಬಹುದಾದರೆ, ಭಾಷೆಯ ಈ ಆಯಾಮವನ್ನು ಕುರಿತು ನಮ್ಮ ಗಮನ ಹರಿಯಬೇಕಾದದ್ದು ಸರಿ, ಯಾಕೆಂದರೆ ಈ ಅಂಶಗಳನ್ನು ಮಾತ್ರವೇ ಪ್ರತಿಯೊಬ್ಬರೂ ಪ್ರಾಯೋಗಿಕವಾಗಿ ಮನಗಾಣುತ್ತಾರೆ. ಅದೂ ಅಲ್ಲದೆ ಭಾಷಾಲಕ್ಷಣದ ಸಾಂಪ್ರದಾಯಿಕ ಅಧ್ಯಯನಗಳು ಸ್ವಲ್ಪಮಟ್ಟಿಗೆ ಮಾನವ ಪ್ರಕೃತಿಯ ಬಗ್ಗೆ ಋಣಾತ್ಮಕವಾಗಿ ತಿಳಿಸುತ್ತವೆ; ಅವರ ಸಾಂಸ್ಕೃತಿಕ ಸಾಧನೆಗಳ ಬಗ್ಗೆ ಅಸ್ಪಷ್ಟವಾದರೂ ಆಪ್ಯಾಯಮಾನವಾದ ರೀತಿಯಲ್ಲಿ ಪ್ರವೇಶಿಸಬಹುದಾದ ಹಾಗು ಮಾನವರಿಗೆ ಮಾತ್ರವೇ ಅಪೂರ್ವವಾದ ಬುದ್ದಿಯ ಲಕ್ಷಣಗಳನ್ನು ತಿಳಿಯುವುದರಲ್ಲಿನ ಮಿತಿಗಳನ್ನು ಎತ್ತಿತೋರಿಸುತ್ತವೆ.

ಭಾಷೆಯನ್ನು ಎದುರಾಗಲು ಭಿನ್ನರೀತಿಯ ಪ್ರವೇಶವನ್ನು ಹುಡುಕುವಾಗ, ಸಹಜವಾಗಿಯೇ ಪಾಶ್ಚಾತ್ಯ ಚಿಂತನೆಯ ಇತಿಹಾಸದ ಕಾಲಾವಧಿಯಲ್ಲಿ "ಸ್ವಾತಂತ್ರ್ಯವನ್ನು ಎಲ್ಲಾ ತಾತ್ವಿಕತೆಗಳ ಮುಖ್ಯ ಉದ್ದೇಶವನ್ನಾಗಿ ಮಾಡಬೇಕೆಂಬ ವಿಚಾರವೇ ಮಾನವ ಚೇತನಕ್ಕೆ ಬಿಡುಗಡೆಯನ್ನು ನೀಡಿದೆ ಮತ್ತು .........ಹಿಂದೆ ಆದ ಯಾವುದೇ ಕ್ರಾಂತಿಗಿಂತ ಅದರಲ್ಲೂ ಮುಖ್ಯವಾಗಿ ವಿಜ್ಞಾನಕ್ಕೆ ಪುನಶ್ಚೇತನವನ್ನು ನೀಡಲು 'ಸ್ವಾತಂತ್ರ್ಯದ' ಅರಿವು ಸಹಾಯ ಮಾಡಿದೆ."ಎನ್ನುವ Schelling ನ ಮಾತು ಮುಖ್ಯವಾಗುತ್ತದೆ. 'ಕ್ರಾಂತಿ' ಎಂಬುದು ಇಲ್ಲಿ ಬಹುಸಂಬಂಧಗಳನ್ನು ಧ್ವನಿಸುತ್ತದೆ. ಯಾಕೆಂದರೆ Schelling ಹೇಳುವ ಹಾಗೆ ಮನುಷ್ಯರು ಹುಟ್ಟಿರುವುದು 'ಕ್ರೀಯಾಶೀಲರಾಗುವುದಕ್ಕೆ, ಯೋಚಿಸುತ್ತಾ ಕೂರುವುದಕ್ಕಲ್ಲ'; "ಘನ ಮನುಕುಲಕ್ಕೆ ಚೇತನದ ಸ್ವಾತಂತ್ರ್ಯವನ್ನು ಘೋಷಿಸುವ ಮತ್ತು ಬಂಧನಗಳನ್ನು ಕಳೆದುಕೊಂಡದ್ದರ ಬಗ್ಗೆ ಕಣ್ಣೀರಿಡುತ್ತಾ ಪಶ್ಚಾತ್ತಾಪ ಪಡುವುದರ ಬಗ್ಗೆ ತಾಳ್ಮೆ ಕಳೆದುಕೊಳ್ಳುವ ಸಮಯ ಬಂದಿದೆ" ಎಂಬ ಅವನ ಮಾತುಗಳು ಹದಿನೆಂಟನೇ ಶತಮಾನದ ಕೊನೆಯ ದಶಕಗಳಲ್ಲಿ ಕೇಳಿ ಬಂದ ಬಿಡುಗಡೆಯ ವಿಚಾರಗಳು ಮತ್ತು ಕ್ರಾಂತಿಕಾರಿ ಕ್ರಿಯೆಗಳನ್ನು ಪ್ರತಿಧ್ವನಿಸುತ್ತವೆ.

Schelling ಪ್ರಕಾರ "ಎಲ್ಲಾ ತಾತ್ವಿಕತೆಯ ಆದಿ ಮತ್ತು ಅಂತ್ಯ - ಸ್ವಾತಂತ್ರ್ಯ" ಜನರು ತಮ್ಮ ಬಂಧನಗಳನ್ನು ಕಳೆದುಕೊಳ್ಳಲು ಕಷ್ಟಪಡುತ್ತಿರುವಾಗ, ನ್ಯಾಯಪರತೆಯನ್ನು ಕಳೆದುಕೊಂಡಿರುವ ಪ್ರಮಾಣಗಳನ್ನು ಪ್ರತಿರೋಧಿಸುತ್ತಿರುವಾಗ, ಹೆಚ್ಚು ಹೆಚ್ಚು ಮಾನವೀಯವಾದ, ಪ್ರಜಾಪ್ರಭುತ್ವವಾದ ಸಾಮಾಜಿಕ ಸಂಸ್ಥೆಗಳನ್ನು ಕಟ್ಟಲು ಹವಣಿಸುತ್ತಿರುವ ಇಂದಿನ ಸಂದರ್ಭದಲ್ಲಿ ಈ ಮಾತುಗಳಿಗೆ ಅರ್ಥವಿದೆ ಹಾಗು ಅವುಗಳನ್ನು ಚರ್ಚಿಸುವ ತುರ್ತು ಸಹ.

ಇಂತಹ ಸನ್ನಿವೇಶದಲ್ಲಿ ತಾತ್ವಿಕ ಅನ್ವೇಷಕನಿಗೆ ಮಾನವ ಸ್ವಾತಂತ್ರ್ಯದ ಲಕ್ಷಣಗಳೇನು, ಮಿತಿಗಳಾವವು ಎಂದು ಪ್ರಶ್ನಿಸುವ ಪ್ರೇರೇಪಣೆ ಸಹಜವಾದದ್ದು. Schelling ಮಾನವನ 'ಸ್ವ' (ego) ವನ್ನು ಉದ್ದೇಶಿಸಿ ಹೇಳುತ್ತಾ " ಅದರ ಸಾರ, ಸ್ವಾತಂತ್ರ್ಯ" ವೆಂದು ಹಾಗು "ಯಾವುದೇ ತಾತ್ವಿಕತೆಗೆ ಉನ್ನತ ಘನತೆ ದೊರೆಯುವುದು ಅದು ತನ್ನನ್ನು ತಾನು ಮಾನವ ಸ್ವಾತಂತ್ರ್ಯಕ್ಕೆ ಹೊಣೆಯಾಗಿಸಿಕೊಳ್ಳುವುದರಲ್ಲಿಯೇ ಇದೆ" ಎಂಬ ಮಾತನ್ನು ಯಾವುದೇ ತತ್ವಜ್ಞಾನಿಯು ಅನುಮೋದಿಸಿಯಾನು.

ಅನೇಕ ಶತಮಾನಗಳ ನಂತರ ನಾವು ಮತ್ತೆ ಅಂತಹ ಕಾಲಘಟ್ಟವನ್ನು ಎದುರಾಗಿದ್ದೇವೆ. ಸಾಂಪ್ರದಾಯಿಕ ಅಧಿಕಾರಕ್ಕೆ ಬಹುತೇಕ ಜನರು ದಾಸರಾಗಿ ನಿಶ್ಚಲವಾಗಿರುವಾಗ ಕ್ರಾಂತಿಕಾರೀ ಪ್ರವಾಹವೊಂದು ತೃತೀಯ ಜಗತ್ತಿನ ವಿಶಾಲ ಸಮೂಹವನ್ನು ಕ್ರಮೇಣ ವ್ಯಾಪಿಸುತ್ತಾ, ಎಚ್ಚರಿಸುತ್ತಾ ಸಾಗುತ್ತಿದೆ. ಕೈಗಾರಿಕಾ ಸಮಾಜಗಳು ಕ್ರಾಂತಿಕಾರೀ ಬದಲಾವಣೆಗಳಿಗೆ ಪಕ್ವವಾಗಿವೆ ಎಂದು ಭಾವಿಸಲಾಗುತ್ತಿದೆ ಕೇವಲ ನವವಾಮ ಪಂಥದ ಪ್ರತಿನಿಧಿಗಳನ್ನು ಮಾತ್ರವೇ ನಾನಿಲ್ಲಿ ಉಲ್ಲೇಖಿಸುತ್ತಿಲ್ಲ.

ಕ್ರಾಂತಿಕಾರಿ ಬದಲಾವಣೆಗಳ ಭೀತಿ, ಸ್ವಾಭಾವಿಕ ಪ್ರವೃತ್ತಿಗಳ ದಮನ ಮತ್ತು ಪ್ರತಿ ಪರಿಣಾಮಗಳನ್ನು ತರುತ್ತದೆ. ಅದರ ಚಿಹ್ನೆಗಳನ್ನು ಫ್ರಾನ್ಸ್, ಸೋವಿಯತ್ ಒಕ್ಕೂಟದಲ್ಲಿ ಮತ್ತು ಸಂಯುಕ್ತ ರಾಷ್ಟ್ರಗಳಲ್ಲಿ ಕಾಣಬಹುದು – ನಾವು ಸಭೆ ಸೇರಿರುವ ಈ ಶಿಕಾಗೋ ನಗರವೇನೂ ಇದಕ್ಕೆ ಹೊರತಲ್ಲ. ಸಹಜವಾಗಿಯೇ, ಅಮೂರ್ತವಾಗಿಯೇ ಆದರೂ, ಮಾನವ ಸ್ವಾತಂತ್ರ್ಯದ ಸಮಸ್ಯೆಗಳನ್ನು ಕುರಿತು ಚಿಂತಿಸಬೇಕಿದೆ, ಪ್ರಾಚೀನ ಸಾಮಾಜಿಕ ಸಂಸ್ಥೆಗಳನ್ನು ಅಧ್ಯಯನ ಮತ್ತು ನಿರಂತರ ದಾಳಿಗೆ ಒಳಪಡಿಸಿದ ಚಿಂತನೆಗಳ ಕಡೆಗೆ ಆಸಕ್ತಿ ಮತ್ತು ಗಂಭೀರ ಗಮನದೊಂದಿಗೆ ತಿರುಗಿನೋಡಬೇಕಿದೆ. ಎಲ್ಲಿಯವರೆಗೂ Schelling ಹೇಳಿದ 'ಮನುಷ್ಯರು ಹುಟ್ಟಿರುವುದು ಕ್ರಿಯಾಶೀಲರಾಗುವುದಕ್ಕೆ, ಯೋಚಿಸುತ್ತಾ ಕೂರುವುದಕ್ಕಲ್ಲ' ಎಂಬ ಎಚ್ಚರಿಕೆಯ ಮಾತುಗಳನ್ನು ನಾವು ನೆನಪಿನಲ್ಲಿ ಇಡುತ್ತೇವೆಯೋ



.ಅಲ್ಲಿಯವರೆಗೂ ನಾವು ಹೀಗೆ ವಿಚಾರ ಮಾಡುವುದು ಸಹಜವಾಗಿದೆ. ಯೋಗ್ಯವಾದದ್ದಾಗಿದೆ.

**–2–**

ಹದಿನೆಂಟನೇ ಶತಮಾನದಲ್ಲಿ ಪ್ರಕಟವಾದ ರೂಸೋ ನ ಕ್ರಾಂತಿಕಾರಿ ದಾಖಲೆ, "ಅಸಮಾನತೆ ಕುರಿತ ಸಂಕಥನ"(1977) ಸ್ವಾತಂತ್ರ್ಯ ಮತ್ತು ದಾಸ್ಯ ಕುರಿತ ಅನ್ವೇಷಣೆಗಳಲ್ಲಿ ಪ್ರಮುಖವಾದದ್ದು. ಇದರಲ್ಲಿ ಅಸಮಾನತೆಯ ಉಗಮ ಮತ್ತು ಅದರ ವಿಸ್ತಾರದ ಹುಡುಕಾಟದ ಜೊತೆಜೊತೆಗೆ, ರಾಜಕೀಯ ಸಮಾಜಗಳ ಸ್ಥಾಪನೆ ಮತ್ತು ಅವುಗಳ ದುರ್ಬಳಕೆಯನ್ನು ಮಾನವ ಪ್ರಕೃತಿಗೆ ಕಂಡಂತೆ, ವಿವೇಚನೆಯ ಬೆಳಕಿನ ಬಲದಿಂದ ತಿಳಿಯಲು ಪ್ರಯತ್ನಿಸುತ್ತಾನೆ. ರೂಸೋನ ನಿರ್ಣಯಗಳು ಎಷ್ಟು ಆಘಾತಕಾರಿಯಾಗಿದ್ದವೆಂದರೆ Dijon ಅಕಾಡೆಮಿಯ ನ್ಯಾಯಾಧೀಶರು, (ಈ ಕೃತಿ ಮೂಲದಲ್ಲಿ ಈ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿತ್ತು.) ಅದರ ಹಸ್ತಪ್ರತಿಯನ್ನು ಕೇಳಿಸಿಕೊಳ್ಳಲೂ ಸಹ ನಿರಾಕರಿಸಿದರು. ಇದರಲ್ಲಿ ರೂಸೋ ಹೆಚ್ಚೂ ಕಡಿಮೆ ಪ್ರತಿಯೊಂದು ಸಾಮಾಜಿಕ ಸಂಸ್ಥೆಯ ವಿಶ್ವಾಸಾರ್ಹತೆಯನ್ನು ಹಾಗು ಆಸ್ತಿ ಮತ್ತು ಸಂಪತ್ತಿನ ಮೇಲಿನ ವೈಯುಕ್ತಿಕ ಹತೋಟಿಯನ್ನು ಪ್ರಶ್ನಿಸುತ್ತಾನೆ. ಇವು "ದುರಾಕ್ರಮಣಗಳು......... ಅನಿಶ್ಚಿತತೆ ಮತ್ತು ಅನ್ಯಾಯದ ಹಕ್ಕುಗಳ ಮೇಲೆ ಸ್ಥಾಪಿತವಾದವುಗಳು.......... ಬಲಪ್ರಯೋಗದಿಂದ ಗಳಿಸಿಕೊಂಡಿರುವುದರಿಂದ ಬಲಪ್ರಯೋಗದಿಂದಲೇ, ಶ್ರೀಮಂತರ ಯಾವುದೇ ಗೊಣಗಾಟಗಳಿಗೆ ಬೆಲೆಕೊಡದೆ, ಕಸಿದುಕೊಳ್ಳಬಹುದಾದಂತಹವು" ಎನ್ನುತ್ತಾನೆ. ವೈಯುಕ್ತಿಕ ಉತ್ಪಾದನೆಯಿಂದ ಗಳಿಸಿದ

ಶಿಕ್ಷಣ ಎಂಬುದು ಜ್ಯೋತಿಯನ್ನು ಬೆಳಗಿಸುವುದೇ ಹೊರತು ಪಾತ್ರೆಯನ್ನು ತುಂಬಿಸುವುದಲ್ಲ.
– ಸಾಕ್ರೆಟಿಸ್.

ಆಸ್ತಿಗೂ ರೂಸೋ ಬಳಿ ಮಾನ್ಯತೆಯಿಲ್ಲ. ಯಾಕೆಂದರೆ, "ನಿಮ್ಮ ಬಳಿ ಹೆಚ್ಚಾಗಿರುವ ವಸ್ತು/ವ್ಯವಸ್ಥೆಗಳ ಕೊರತೆಯಿಂದ ಅಗಣಿತ ಸಹೋದರರು ಸಾಯುತ್ತಾ, ನರಳುತ್ತಿರುವುದು ತಿಳಿಯದೇನು? ಸಾಮಾನ್ಯರ ಮಟ್ಟದ ಅವಶ್ಯಕತೆಗೆ ಮೀರಿ ಹೆಚ್ಚಾಗಿರುವುದನ್ನು ನೀವು ಅನುಭವಿಸುವುದು ಸರಿ ಎನ್ನುವುದಕ್ಕೆ ಮನುಕುಲದ ಸರ್ವಸಮ್ಮತ ಒಪ್ಪಿಗೆ ಇದೆಯೇನು? ಬೆರಳೆಣಿಕೆಯಷ್ಟು ಮಂದಿ ಸರ್ವ ಸೌಭಾಗ್ಯಗಳನ್ನು ಒಟ್ಟಿಕೊಂಡು, ಸಾಮಾನ್ಯ ಸಮುದಾಯ ಮೂಲಭೂತ ಅವಶ್ಯಕತೆಗಳೂ ಇಲ್ಲದಂತೆ ನರಳುತ್ತಿರುವುದು ಪ್ರಕೃತಿಯ ನಿಯಮಗಳಿಗೆ ವಿರುದ್ಧವಾದದ್ದು."

ನಾಗರಿಕ ಸಮಾಜವೆಂಬುದು ಶ್ರೀಮಂತರು ತಮ್ಮ ಲೂಟಿಯನ್ನು ನಿರಂತರವಾಗಿ ಮುಂದುವರೆಸಿ ಕೊಂಡು ಹೋಗುವ ಸಲುವಾಗಿ ಇರುವ ಜಾಲ. ಅಪ್ರಮಾಣಿಕವಾಗಿ, ಶ್ರೀಮಂತರು ತಮ್ಮ ನೆರೆಹೊರೆಯನ್ನು, "ಶಾಂತಿ ಮತ್ತು ನ್ಯಾಯದ ನಿಯಮಾವಳಿಗಳನ್ನು ಸಾಂಸ್ಥೀಕರಿಸುವಂತೆ ಕರೆ ನೀಡುತ್ತಾರೆ, ಪ್ರತಿಯೊಬ್ಬರೂ ಅದಕ್ಕೆ ಬದ್ಧರಾಗಿರುವಂತೆಯೂ, ಯಾರೊಬ್ಬರನ್ನೂ ಹೊರತುಪಡಿಸದಂತೆ ಮತ್ತು ಅದೃಷ್ಟದ ಹುಚ್ಚಾಟದಲ್ಲಿ ನೊಂದವರಿಗೆ ಪರಿಹಾರವೆಂಬಂತೆ ಬಲವಂತರನ್ನೂ, ಬಲಹೀನರನ್ನೂ ಸಮಾನವಾಗಿ ಪರಸ್ಪರ ಹಕ್ಕುಗಳಿಗೆ ಅಧೀನವಾಗಿರುವಂತೆ ನೋಡಿಕೊಳ್ಳುತ್ತಾರೆ." ಈ ಕಾನೂನುಗಳು, ಅನತೋಲ್ ಫ್ರಾಂಕ್ ಹೇಳುವ ಹಾಗೆ ತಮ್ಮ ಘನತೆಯ ನೆಪದಲ್ಲಿ ಶ್ರೀಮಂತರಿಗೆ ಮತ್ತು ಬಡವರಿಗೆ ಇಬ್ಬರಿಗೂ ಸಮಾನವಾದ ಕೆಲವು ಹಕ್ಕನ್ನು ಕಿತ್ತುಕೊಳ್ಳುತ್ತವೆ. ಇಂತಹ ವಾದಗಳಿಂದ ಬಡವರು ಮತ್ತು ಬಲಹೀನರು ದುರ್ಮಾರ್ಗದೆಡೆಗೆ ಪ್ರೇರೇಪಣೆ ಪಡೆಯುತ್ತಾರೆ: ಸ್ವಾತಂತ್ರ್ಯವನ್ನು ಗಳಿಸುತ್ತಿದ್ದೇವೆ ಎಂದು ತಿಳಿಯುತ್ತಾ ತಮ್ಮ ಬಂಧನಗಳನ್ನು ಭೇಟಿ ಮಾಡಲು ಧಾವಿಸುತ್ತಾರೆ........" ಹೀಗೆ ಸಮಾಜ ಮತ್ತು ಕಾನೂನುಗಳು ಬಡವರಿಗೆ ಹೊಸ ಬಂಧನಗಳನ್ನೂ, ಶ್ರೀಮಂತರಿಗೆ ಹೊಸ ವೇಗವನ್ನು ನೀಡಿ ಆಮೂಲಕ ನೈಜ ಸ್ವಾತಂತ್ರ್ಯವನ್ನು ಎಲ್ಲಾ ಕಾಲಕ್ಕೂ ನಾಶ ಮಾಡಿವೆ, ಆಸ್ತಿ ಮತ್ತು ಅಸಮಾನತೆಯ ಕಾನೂನನ್ನು ಸ್ಥಾಪಿಸಿ, ಬುದ್ಧಿವಂತಿಕೆಯಿಂದ ಮಾಡಿದ ದುರಾಕ್ರಮಣಗಳನ್ನು ಶಾಶ್ವತವಾದ ಹಕ್ಕುಗಳನ್ನಾಗಿಸಿ ಮಹಾತ್ವಕಾಂಕ್ಷೆ ಉಳ್ಳ ಕೆಲವೇ ಜನರಿಗೆ ಆದಾಯವನ್ನು ತಂದದ್ದಲ್ಲದೆ, ಇಡೀ ಮನುಕುಲವನ್ನು ಕಠಿಣ ಶ್ರಮ, ದಾಸ್ಯ ಮತ್ತು ದಾರಿದ್ರ್ಯಕ್ಕೆ ಅಧೀನವಾಗಿಸಿದೆ."

ಸರ್ಕಾರಗಳು ಅನಿವಾರ್ಯವಾಗಿ 'ತಮ್ಮ ಭ್ರಷ್ಟತೆ ಮತ್ತು ಗರಿಷ್ಠ ಮಿತಿ'ಯ ನಿರಂಕುಶ ಅಧಿಕಾರದ ಕಡೆಗೆ ನಡೆಯುತ್ತವೆ. ಈ ಅಧಿಕಾರವು 'ಅದರ ಪ್ರಕೃತಿಯಂತೆಯೇ ಅಕ್ರಮವಾದದ್ದು', ಮತ್ತು ಹೊಸ ಕ್ರಾಂತಿಗಳು ಈ ಸರ್ಕಾರ ವ್ಯವಸ್ಥೆಯನ್ನು ವಿಸರ್ಜಿಸಬೇಕು ಅಥವಾ ನ್ಯಾಯಬದ್ಧವಾದ ಸಂಸ್ಥೆಗಳ ಹತ್ತಿರವಾದರೂ ತರುವ ಪ್ರಯತ್ನವನ್ನು ಮಾಡಬೇಕು.... ಸುಲ್ತಾನನೊಬ್ಬನ ಜೀವ ತೆಗೆಯುವ ಅಥವಾ ಸ್ಥಾನಭ್ರಷ್ಟನನ್ನಾಗಿಸುವ ಯಾವುದೇ ದಂಗೆ ಆತ ಹೇಗೆ ತನ್ನ ಅಧೀನದಲ್ಲಿದ್ದವರ ಜೀವ ಮತ್ತು ಆಸ್ತಿಪಾಸ್ತಿ ಯನ್ನು ಇಚ್ಛೆಪಟ್ಟು ಕಿತ್ತುಕೊಂಡನೋ ಅದಕ್ಕಿಂತ ಯಾವ ರೀತಿಯಲ್ಲೂ ಅನ್ಯಾಯವಲ್ಲ. ಬಲ ಅವನನ್ನು ರಕ್ಷಿಸಿತ್ತು; ಹಾಗೆಯೇ ಬಲ ಅವನನ್ನು ಕೆಳಗೆ ತಳ್ಳಿದೆ.

ಪ್ರಸ್ತುತ ಸಂದರ್ಭದಲ್ಲಿ ಕುತೂಹಲ ವಾದದ್ದೇನೆಂದರೆ ತನ್ನ ತೀರ್ಮಾನಗಳನ್ನು ಮಾನವ ಪ್ರಕೃತಿಯ ವಿಚಾರಗಳಿಂದ ಮೊದಲುಗೊಂಡಂತೆ 'ವಿವೇಚನೆಯ ಬೆಳಕಿನಿಂದ ಮಾತ್ರವೇ' ತಲುಪಲು ರೂಸೋ ಅನುಸರಿಸುವ ಹಾದಿ. ಅವನು ಮಾನವನನ್ನು "ಪ್ರಕೃತಿಯು ರೂಪಿಸಿದ ಹಾಗೆ" ನೋಡಬಯಸುತ್ತಾನೆ. ಮಾನವರ ಸಹಜ ಪ್ರಕೃತಿಯ ನೆಲೆಯಿಂದ ಅವರ ಹಕ್ಕುಗಳನ್ನು ರೂಪಿಸುವ ನಿಯಮಗಳು ಮತ್ತು ಸಾಮಾಜಿಕ ಅಸ್ತಿತ್ವದ ಬುನಾದಿಗಳನ್ನು ಅರಿತು ಕೊಳ್ಳಬೇಕು. ನೈಜ ಮನುಷ್ಯರ ಈ ತರಹದ ಅಧ್ಯಯನ, ಅವರ ನಿಜ ಅವಶ್ಯಕತೆಗಳು, ಅವರ ಕರ್ತವ್ಯವನ್ನು ಆಳುವ ನಿಯಮಗಳನ್ನು ತಿಳಿಯುವು ದರಿಂದ ಮಾತ್ರವೇ ನೈತಿಕ ಅಸಮಾನತೆಯ ಉಗಮ, ರಾಜಕೀಯ ಅಂಗಗಳ ಬುನಾದಿ, ಅದರ ಸದಸ್ಯರ ಸಮಾನ ಹಕ್ಕುಗಳು, ಇಂತಹವೇ ಸಾವಿರಾರು ಮುಖ್ಯವಾದ ಪ್ರಶ್ನೆಗಳ ಬಗ್ಗೆ ಇರುವ ತಪ್ಪು ಗ್ರಹಿಕೆಗಳ ಸರಮಾಲೆಯನ್ನು ತೊಡೆದುಹಾಕಬಹುದು.

ರೂಸೋ ಮನುಷ್ಯ ಮತ್ತು ಪ್ರಾಣಿಗಳ ನಡುವೆ ಹೋಲಿಸುತ್ತಾ ಮಾನವರ ಲಕ್ಷಣಗಳನ್ನು ವಿವರಿಸುತ್ತಾನೆ. ಮನುಷ್ಯ ಬುದ್ಧಿವಂತ, ಸ್ವತಂತ್ರ....... ವಿವೇಚನೆ ಹೊಂದಿರುವ ಏಕಮಾತ್ರ ಜೀವಿ." ಪ್ರಾಣಿಗಳಿಗೆ, "ಬುದ್ಧಿವಂತಿಕೆಯಾಗಲೀ ಸ್ವಾತಂತ್ರ್ಯವಾಗಲೀ ಇಲ್ಲ."

ನಿಜಕ್ಕೂ ತಮಾಷೆಯಾದ ಒಂದು ಪುಸ್ತಕ ಬರೆಯಬೇಕಾದರೆ ಬಹಳಷ್ಟು ಶಿಕ್ಷೆ ಅನುಭವಿಸಬೇಕಾಗುತ್ತದೆ. – ಅರ್ನೆಸ್ಟ್ ಹೆಮಿಂಗ್ ವೇ.

ಪ್ರತಿಯೊಂದು ಪ್ರಾಣಿಯಲ್ಲೂ ಪ್ರಕೃತಿ ನೀಡಿರುವ ಬುದ್ಧಿಯನ್ನು ಕಾರ್ಯಗತಗೊಳಿಸುವ, ಜೀವ ತುಂಬುವ, ಅದನ್ನು ನಾಶದಿಂದ/ಗೊಂದಲದಿಂದ ತಪ್ಪಿಸಿ, ಬದುಕುವ ಚೈತನ್ಯ ನೀಡುವ ಒಂದು ಸಂಪನ್ಮೂಲ ಯಂತ್ರ ಮಾತ್ರವೇ ನನಗೆ ಕಾಣುತ್ತದೆ. ಮನುಷ್ಯನಲ್ಲೂ ಸಹ ಇಂತಹ ಒಂದು ವ್ಯವಸ್ಥೆಯೇ ಇದೆ. ಆದರೆ ಪ್ರಾಣಿಗಳ ಎಲ್ಲಾ ಕಾರ್ಯಗಳು ಪ್ರಕೃತಿಯ ಆಣತಿಯಂತೆ ನಡೆದರೆ, ಮಾನವ ತನ್ನ ಕಾರ್ಯಗಳನ್ನು ಒಬ್ಬ ಸ್ವತಂತ್ರ ಜೀವಿಯಾಗಿ ನಿಭಾಯಿಸಬಲ್ಲ. ಪ್ರಾಣಿಗಳ ಇಂದ್ರಿಯ ಪ್ರೇರಣೆಯಿಂದ ಆಯ್ಕೆ/ನಿರಾಕರಣೆಗಳು ನಡೆದರೆ, ಮಾನವನ ಆಯ್ಕೆಗಳು ಸ್ವತಂತ್ರ ಕ್ರಿಯೆಗಳಿಂದ ನಡೆಯುತ್ತವೆ. ಪ್ರಾಣಿಗಳು ನಿಯಮತಪ್ಪಿ ನಡೆದರೆ ಅನುಕೂಲವಾಗುವುದಾದರೂ ಪ್ರಕೃತಿಯುನ್ನು ಮೀರಲಾರವು, ಆದರೆ ಮನುಷ್ಯನು ತನಗೆ ಅನಾನುಕೂಲವಾಗದೇ ಹೋದಾಗಲೂ ಸಹ ಕೆಲವೊಮ್ಮೆ ಪ್ರಕೃತಿಯ ನಿಯಮಗಳನ್ನು ಮೀರುತ್ತಾನೆ. ಪ್ರಾಣಿಗಳಿಗೂ ಮನುಷ್ಯನಿಗೂ ಇರುವ ಮುಖ್ಯ ವ್ಯತ್ಯಾಸ ಇದೇ. ಪ್ರತಿಯೊಂದು ಪ್ರಾಣಿಯನ್ನೂ ಪ್ರಕೃತಿ ಆದೇಶಿಸುತ್ತದೆ, ಮತ್ತು ಮೃಗವು ಅದನ್ನು ಪಾಲಿಸುತ್ತದೆ. ಮನುಷ್ಯನಿಗೂ ಇದೇ ಶಕ್ತಿ ಪ್ರೇರೇಪಿಸುತ್ತದೆ, ಆದರೆ ಈ ಆದೇಶಗಳನ್ನು ಒಪ್ಪಿಕೊಳ್ಳಲಾಗಲಿ, ನಿರಾಕರಿಸಲಾಗಲಿ ತಾನು ಸ್ವತಂತ್ರನು ಎಂಬುದನ್ನು ಆತ ಬಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಈ ಸ್ವಾತಂತ್ರ್ಯದ ಪ್ರಜ್ಞೆ/ಅರಿವೇ ಅವನ ಆತ್ಮ ಧರ್ಮ. ಭೌತಶಾಸ್ತ್ರವು ಸ್ವಲ್ಪಮಟ್ಟಿಗೆ ಇಂದ್ರಿಯಗಳ ಕಾರ್ಯನಿರ್ವಹಣೆ ಮತ್ತು ವಿಚಾರಗಳು ಹೇಗೆ ರೂಪಗೊಳ್ಳುತ್ತವೆ ಎಂಬುದನ್ನು ವಿವರಿಸುತ್ತದೆಯಾದರೂ; ಒಪ್ಪಿಕೊಳ್ಳುವ/ ಆಯ್ದು ಕೊಳ್ಳುವ ಬಲದ ಹಿಂದೆ ಇರುವ ತಾತ್ವಿಕ ಕ್ರಿಯೆಗಳನ್ನು ತಾಂತ್ರಿಕ ನಿಯಮದನ್ವಯ ವಿವರಿಸಲಾರವು.

ಅದ್ದರಿಂದಲೇ ಸ್ವಾತಂತ್ರ್ಯ ಮತ್ತು ಈ ಸ್ವಾತಂತ್ರ್ಯದ ಪ್ರಜ್ಞೆ ಮಾನವರ ಲಕ್ಷಣ. ಅದಕ್ಕೇ ರೂಸೋ ಹೇಳುತ್ತಾನೆ, "ದಾಸನ ಮಗ ದಾಸನಾಗಿಯೇ ಹುಟ್ಟುತ್ತಾನೆ ಎಂದು ಗಂಭೀರವಾಗಿ ನಿರ್ಧರಿಸುವ ಈ ಕಾನೂನುತಜ್ಞರು, ತಮ್ಮಷ್ಟಕ್ಕೆ ತಾವೇ ಮನುಷ್ಯ ಮನುಷ್ಯನಾಗಿ ಹುಟ್ಟಲಾರನು ಎಂದು ನಿರ್ಧರಿಸಿಕೊಂಡು ಬಿಟ್ಟಿರುತ್ತಾರೆ."

ಮನುಷ್ಯನನ್ನು ವ್ಯಾಖ್ಯಾನಿಸುವ ಪ್ರಮುಖವಾದ ಆಸ್ತಿ 'ಸ್ವಾತಂತ್ರ್ಯ' ಎಂಬ ಪದವನ್ನು ಅಸ್ಪಷ್ಟಗೊಳಿಸಲು ಹುರುಳಿಲ್ಲದ ರಾಜಕಾರಣಿಗಳು ಮತ್ತು ಬುದ್ಧಿಜೀವಿಗಳು ಮಾರ್ಗಗಳನ್ನು ಹುಡುಕುತ್ತಾರೆ. ದಾಸ್ಯವು ಮಾನವರ ಸಹಜಲಕ್ಷಣವೆಂದು ಆರೋಪಿಸುತ್ತಾರೆ. ಆದರೆ ಸ್ವಾತಂತ್ರ್ಯವು ಮುಗ್ಧತೆಯಂತೆ, ಒಳ್ಳೆಯ ಲಕ್ಷಣದಂತೆ, ಅನುಭವಿಸುವವರೆಗೂ ರುಚಿಯಿರುತ್ತದೆ, ಕಳೆದುಕೊಂಡ ಗಳಿಗೆಯಿಂದಲೇ ರುಚಿಕಳೆದುಕೊಳ್ಳುತ್ತದೆ ಎಂಬುದನ್ನು ಯೋಚಿಸುವುದೇ ಇಲ್ಲ." ಮನುಷ್ಯನ ಘನತೆಯ ಲಕ್ಷಣವಾದ ಸ್ವಾತಂತ್ರ್ಯವನ್ನು ತಿರಸ್ಕರಿಸಿ ಮನೋವಿಕಾರಗಳಿಗೆ ದಾಸನಾಗಿ, ಅಧಿಕಾರವೆಂಬ ಕ್ರೂರ, ಹುಚ್ಚು ಧಣಿಯನ್ನು ತೃಪ್ತಗೊಳಿಸಲು ಎಲ್ಲಾ ತರಹದ ಕ್ರೌರ್ಯವನ್ನು ಮಾಡುವುದು ಮಾನವ ಲಕ್ಷಣಕ್ಕೆ ಆಗುವ ಅವಮಾನ ಎನ್ನುತ್ತಾನೆ ರೂಸೋ. ಪರಿಸರ ಮತ್ತು ವಿವೇಚನೆಯನ್ನು ನಡುಗಿಸಿರುವ ಅಸಂಖ್ಯಾತ ಯುದ್ಧ, ಕೊಲೆ, ಸೇಡು, ಮತ್ತು ಮಾನವರ ರಕ್ತಹರಿಸುವುದನ್ನು ಗೌರವಯುತವಾಗಿ ಮಾನ್ಯ ಮಾಡುವ ಭೀಕರ ಪೂರ್ವಾಗ್ರಹಗಳು ಈ ಇಪ್ಪತ್ತನೇ ಶತಮಾನದಲ್ಲಿ ಹುಟ್ಟಿಕೊಂಡಿವೆ.

"ಸ್ವಾತಂತ್ರ್ಯಕ್ಕಾಗಿ ಇರುವ ಹೋರಾಟ ಮಾನವನ ಮುಖ್ಯವಾದ ಲಕ್ಷಣ" ಎನ್ನುವ ರೂಸೋನ ಸಿದ್ಧಾಂತಕ್ಕೆ ದಬ್ಬಾಳಿಕೆಯಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಮಾಡಿರುವ ಸ್ವಾತಂತ್ರ್ಯಪರ ಹೋರಾಟಗಳಲ್ಲಿ ಪುರಾವೆಗಳು ದೊರೆಯುತ್ತವೆ. "ಸ್ವಾತಂತ್ರ್ಯವನ್ನು ಧಿಕ್ಕರಿಸುವ ಮನುಷ್ಯರು ತಮ್ಮ ಬಂಧನಗಳಲ್ಲಿ ಪಡೆಯುವ ಶಾಂತಿ ಮತ್ತು ವಿಶ್ರಾಂತಿಯನ್ನು ಹಾಡಿಹೊಗಳುತ್ತಿರುತ್ತಾರೆ. ಆದರೆ ಇಂತಹ ಜನರು ತಿರಸ್ಕರಿಸುವ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಕೆಲವರಾದರೂ ಇರುತ್ತಾರೆ. ಅವರು ತಮ್ಮ ಎಲ್ಲಾ ಅಧಿಕಾರ, ಆಸ್ತಿ, ಸೌಭಾಗ್ಯ, ಶ್ರಮಗಳನ್ನು ಸ್ವಾತಂತ್ರ್ಯಕ್ಕಾಗಿ ತ್ಯಾಗ ಮಾಡುತ್ತಾರೆ; ದಾಸ್ಯದ ಸೆರೆಯ ಕಂಬಿಗಳಿಗೆ ತಲೆ ಚಚ್ಚಿಕೊಳ್ಳುತ್ತಾರೆ, ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಅಸಂಖ್ಯಾತ ಅಮೇರಿಕಾದ ನಗ್ನ ಮೂಲನಿವಾಸಿ 'ಅನಾಗರಿಕರು' ಯೂರೋಪಿನ ಲಾಲಸೆಯನ್ನು ಧಿಕ್ಕರಿಸಿ ಹಸಿವು, ಬೆಂಕಿ, ಮತ್ತು ಸಾವನ್ನು

ಅಪ್ಪಿಕೊಳ್ಳುತ್ತಾರೆ. ಹೀಗಿರುವಾಗ ದಾಸರಿಗೆ ಸ್ವಾತಂತ್ರ್ಯದ ಬಗ್ಗೆ ವಿವೇಚನೆ ಇಲ್ಲ ಎಂದು ನಾನು ಹೇಳಲಾರೆ." ಎನ್ನುತ್ತಾನೆ ರೂಸೋ.

ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲಿ ಆಳು ಮಕ್ಕಳನ್ನು ಸಂಬೋದಿಸುತ್ತಾ, "ಈ ಮಂದಿ ಇನ್ನೂ ಸ್ವಾತಂತ್ರ್ಯಕ್ಕೆ ಪಕ್ವವಾಗಿಲ್ಲ" ಎಂದಾಗ ಕಾಂಟ್ ಕೂಡ ರೂಸೋನಂತೆಯೇ ದಮನಿತರನ್ನು ಸಮರ್ಥಿಸುತ್ತಾನೆ.

ಮನುಷ್ಯ ಲಕ್ಷಣಗಳು ಯಾವುದೇ ಭೌತಿಕ ವಿವರಣೆಗಳಿಗೆ ಒಗ್ಗುವುದಿಲ್ಲ. ಅವನ ಸ್ವಾತಂತ್ರ್ಯ ಮತ್ತು ಸ್ವಾತಂತ್ರ್ಯ ಪ್ರಜ್ಞೆ ವಿವರಣೆಗೆ ಮೀರಿದ್ದು ಎನ್ನುವ ಕಾರ್ಟೆಸಿಯನ್ ಮಾದರಿಯನ್ನು ರೂಸೋ ಅನುಸರಿಸುತ್ತಾನೆ. Descartes ಮತ್ತು ಅವನ ಅನುಯಾಯಿಗಳಿಗೆ ಅನ್ಯ ಜೀವಿಯೊಂದಕ್ಕೆ ಬುದ್ಧಿಯಿದೆ ಮತ್ತು ಅದು ಯಾವುದೇ ಯಾಂತ್ರಿಕ ವಿವರಣೆಗೆ ನಿಲುಕದು ಎಂಬುದರ ಸ್ಪಷ್ಟ ಚಿಹ್ನೆಯೇ ಭಾಷಾ ಬಳಕೆ. ಆದರೆ ಭಾಷಾ ಬಳಕೆಯು ಸಹಜವಾಗಿ, ನವ-ನಾವೀನ್ಯತೆಯಿಂದ, ಸಂದರ್ಭಕ್ಕೆ ತಕ್ಕದಾಗಿ, ಹೊಂದಾಣಿಕೆಯಿಂದ ಕೂಡಿ, ನಮ್ಮ ಬುದ್ಧಿಯಲ್ಲಿ ಹೊಸ ಯೋಚನೆ, ವಿಚಾರಗಳನ್ನು ಪ್ರೇರೇಪಿಸುವಂತೆ ಇರಬೇಕು. Cartesian ಸಿದ್ಧಾಂತದ ಪ್ರಕಾರ ಪ್ರತಿಯೊಬ್ಬ ಮನುಷ್ಯನಲ್ಲೂ ಬುದ್ಧಿಯಿರುತ್ತದೆ ಮತ್ತು ಅದರ ಸಾರವೇ ವಿಚಾರ; ಸೃಜನಾತ್ಮಕವಾದ ಭಾಷೆಯ ಬಳಕೆಯು ಸ್ವಾತಂತ್ರ್ಯವನ್ನು ಪ್ರತಿಫಲಿಸುತ್ತದೆ.

(ಮುಂದುವರೆಯುತ್ತದೆ.........).

–ಡಾ॥ ಸರಸ್ವತಿ ಕೆ.ಬಿ.
n.sarassri@rediffmail.com

## ನೆನಪು | ಚಿನುವಾ ಅಚಿಬೆ (1930-2013)

ನೈಜೀರಿಯಾದ ಕಾದಂಬರಿಕಾರ ಹಾಗು ಆಫ್ರಿಕಾ ಸಾಹಿತ್ಯದ ಪಿತಾಮಹ ಚಿನುವಾ ಅಚಿಬೆ 1930ರಲ್ಲಿ ಒಗಿಡಿಯ ಬಳಿಯ ಗ್ರಾಮದಲ್ಲಿ ಜನಿಸಿದರು. ಅತ್ಯುತ್ತಮ ಕಾದಂಬರಿಕಾರ, ಕವಿ, ಪ್ರಬಂಧಕಾರರಾಗಿ ಪ್ರಚಲಿತವಾಗಿದ್ದ ಅಚಿಬೆ 'ಆಫ್ರಿಕಾದ ಜನ-ಸಂಸ್ಕೃತಿಯನ್ನು' ಕುರಿತು ತಮ್ಮ ಬರಹಗಳಲ್ಲಿ ಬರೆದಿದ್ದಾರೆ.

ಅವರ ಸರ್ವಶ್ರೇಷ್ಠ ಕಾದಂಬರಿ 'Things Fall Apart' 1958 ರಲ್ಲಿ ಪ್ರಕಟವಾಯಿತು. ಪ್ರಪಂಚದಾದ್ಯಂತ 50ಕ್ಕೂ ಅಧಿಕ ಭಾಷೆಗಳಲ್ಲಿ ಪ್ರಕಟವಾಗಿರುವ ಈ ಕೃತಿಯ 10 ಮಿಲಿಯನ್ ಪ್ರತಿಗಳು ಮಾರಾಟವಾಗಿವೆ. 19ನೇ ಶತಮಾನಾಂತ್ಯದ ಮೊದಲಿನ 'ಇಬೂ' ಹಳ್ಳಿಯ ಚಿತ್ರಣ ಹಾಗು ಬಿಳಿಯರ ಆಗಮನದ ನಂತರದ ದಿನಗಳು ಕಥಾವಸ್ತುವಿನ ಮೂಲವಾಗಿದೆ. ಕಥಾನಾಯಕ ಒಕೋಂಕ್ವೊ ಮತ್ತು ಬಿಳಿಯರ ವಸಾಹಾತು ಶಾಹಿಯ ನಡುವಿನ ಜಿದ್ದಾಟವೇ ಕಥಾವಸ್ತುವಾಗಿದೆ. ಬಿಳಿಯರು ಬುದ್ಧಿಜೀವಿಗಳು, ತಮ್ಮ ಧರ್ಮದೊಂದಿಗೆ 'ಇಬೂ' ಹಳ್ಳಿಗೆ ಬಂದವರು ಸಹೋದರರಂತಿದ್ದ ಹಳ್ಳಿಗರ ಒಗ್ಗಟ್ಟನ್ನು ಹೇಗೆ ಮುರಿಯುತ್ತಾರೆ ಎಂಬುದೇ ಕಥಾವಿಷಯದ ಭಾಗ. ಈ ಕೃತಿಯನ್ನು 'ಚಿರಕಾಲ ಓದಿಸಿಕೊಳ್ಳುವ ಕೃತಿ' ಎಂದು ಕವಿ Jakie Kie ಶ್ಲಾಘಿಸಿದ್ದಾರೆ. ಕಾವ್ಯಕ್ಕಾಗಿ ಇರುವ ಕಾಮನ್ ವೆಲ್ತ್ ಹಾಗು ಕಾದಂಬರಿಗಾಗಿ ಇರುವ ಬೂಕರ್ ಪ್ರಶಸ್ತಿಯನ್ನು ಪಡೆದಿರುವ ಈ ಲೇಖಕ ತನ್ನ ತಾಯ್ನಾಡು ನೈಜೀರಿಯಾದ ಆಂತರಿಕ ಕಲಹಗಳಿಂದ ತುಂಬಾ ನೊಂದಿದ್ದರು. ರಾಷ್ಟ್ರ ಅಧ್ಯಕ್ಷ ಸನ್ಮಾನವನ್ನು ಎರಡು ಬಾರಿ ತಿರಸ್ಕರಿಸಿ ಪ್ರಭುತ್ವದ ವಿರುದ್ಧ ತಮ್ಮ ಪ್ರತಿಭಟನೆಯನ್ನು ತೋರಿಸಿದ್ದರು. ಇಂತಹ ಸತ್ವಯುಕ್ತ ಲೇಖಕರ ನಿಧನಕ್ಕಾಗಿ ಶ್ರದ್ಧಾಂಜಲಿ ಸಲ್ಲಿಸುವುದು ನಮ್ಮೆಲ್ಲರ ಕರ್ತವ್ಯಾಗಿದೆ.

ಚಿನುವಾ ಅಚಿಬೆಯವರ ಇತರ ಪ್ರಮುಖ ಕೃತಿಗಳು: No Longer at ease (1960), Arrow of God (1964), A Man of the People (1966), Anthills of Savannah (1988)

- ಮಹೇಶ್ ಕೆ.ಎಸ್
ತೃತೀಯ ಬಿ.ಎ ಆಂಗ್ಲ (ಐಚ್ಛಿಕ)
ಸರ್ಕಾರಿ ಪದವಿ ಕಾಲೇಜು, ತಿಪಟೂರು.

ನಮಗೆ ಬೇಕಾದದ್ದು ದೊರೆಯದಿದ್ದರೆ ದೊರೆತದ್ದನ್ನೇ ಪ್ರೀತಿಸೋಣ – ಸ್ಪೈನ್ ಗಾದೆ.

## ಪುನರುಜ್ಜೀವನ ಕಾಲದ ಇಂಗ್ಲೆಂಡಿನ ಬದುಕು

ಇಂಗ್ಲಿಷ್ ಸಾಹಿತ್ಯದಲ್ಲಿ ಪುನರುಜ್ಜೀವನ (Renaissance)ಎಂದು ಕರೆಯಲಾಗುವ 1485–1660ರ ವರೆಗಿನ ಕಾಲದ ಬದುಕು ಮತ್ತು ಅದರ ಸಾಂಸ್ಕೃತಿಕ ಪ್ರತಿಫಲನಗಳನ್ನು ತಿಳಿದುಕೊಳ್ಳುವುದರಿಂದ ಶೇಕ್ಸ್‌ಪಿಯರ್, ಮಿಲ್ಟನ್ ಮತ್ತು ಜಾನ್‌ಸನ್‌ರಂತಹ ಬರಹಗಾರರನ್ನು ಅರ್ಥ ಮಾಡಿಕೊಳ್ಳಲು ಅನುಕೂಲ ವಾಗುತ್ತದೆ.

1485 ರಲ್ಲಿ ಟ್ಯೂಡರ್ ರಾಜವಂಶ ಇಂಗ್ಲೇಂಡಿನ ಅಧಿಕಾರ ಹಿಡಿಯಿತು. ಈ ವಂಶದ ದೊರೆ ಎಂಟನೇ ಹೆನ್ರಿ (1509–1547) ಇಂಗ್ಲೆಂಡಿನ ಧಾರ್ಮಿಕತೆ ಮತ್ತು ಸಾಮಾಜಿಕತೆಯನ್ನು ತೀವ್ರವಾಗಿ ಪ್ರಭಾವಿಸುತ್ತಾನೆ. ತನಗೆ ಗಂಡು ಮಕ್ಕಳು ಆಗಲೇಬೇಕೆಂದು ಹಠ ಹಿಡಿದವನಂತೆ ಆರು ಬಾರಿ ಮದುವೆ ಯಾಗುತ್ತಾನೆ. ಈತನಿಗೆ ಮೂರು ಮಕ್ಕಳು: ಆರನೇ ಎಡ್ವರ್ಡ್, ಮೊದಲನೇ ಮೇರಿ ಹಾಗು ಪ್ರಖ್ಯಾತ ಮೊದಲನೇ ಎಲಿಜಬೆತ್ ರಾಣಿ. ತನ್ನ ಮೊದಲನೇ ಹೆಂಡತಿ ಕ್ಯಾಥರಿನ್ ನೊಂದಿಗಿನ ಮದುವೆಯನ್ನು ಕೊನೆ ಗಾಣಿಸಲು ಚರ್ಚ್ ವಿರೋಧಿಸಿದಾಗ, ಹೆನ್ರಿ ಇಂಗ್ಲೆಂಡಿನ ರಾಜರ ಮೇಲಿನ ಚರ್ಚ್‌ಗಿದ್ದ ಅಧಿಕಾರವನ್ನೇ ಕೊನೆಗೊಳಿಸುತ್ತಾನೆ ಹಾಗು ರಾಜನೇ ರಾಜಕೀಯ ಅಧಿಕಾರದ ಪರಮೋಚ್ಛ ಅಧಿಕಾರಿ ಎಂದು ಘೋಷಿಸಿಕೊಳ್ಳುತ್ತಾನೆ. ಹೀಗಾಗಿ ಇಂಗ್ಲೇಂಡಿನ ಚರ್ಚ್ 1517ರ ಜರ್ಮನಿಯಲ್ಲಿ ಮಾರ್ಟಿನ್ ಲೂಥರ್‌ನಿಂದ ಪ್ರಾರಂಭವಾದ ಧಾರ್ಮಿಕ ಪಂಥ 'ಪ್ರಾಟೆಸ್ಟೆಂಟ್ಸ್'ಗೆ ಹತ್ತಿರವಾಗುತ್ತದೆ. ಆರನೇ ಎಡ್ವರ್ಡ್‌ನ ಕಾಲಕ್ಕೆ ಪ್ರಾಟೆಸ್ಟೆಂಟ್ ಧರ್ಮ ಇಂಗ್ಲೆಂಡಿನ ಅಧಿಕೃತ ಧರ್ಮವಾಗುತ್ತದೆ.

ನಂತರ ಆಡಳಿತ ನಡೆಸಿದ ಎಲಿಜಬೆತ್ ರಾಣಿಯ ಕಾಲಕ್ಕೆ ಶಕ್ತಿಶಾಲಿ ನೌಕಾಬಲ ಹಾಗು ಸೇನಾಬಲವನ್ನು ಹೊಂದಿದ ಇಂಗ್ಲೆಂಡ್ ಇಡೀ ಯೂರೋಪ್ ಖಂಡದಲ್ಲೇ ಅಜೇಯವೆನಿಸಿತು. ಆಯಸ್ಕಾಂತದ ದಿಕ್ಸೂಚಿಗಳು, ಭೂಪಟಗಳು ಹೊಸ ಜಗತ್ತನ್ನು ಅನ್ವೇಷಿಸಲು ಉತ್ಸುಕರಾದ ನಾವಿಕರಿಗೆ ಸಹಕಾರಿಯಾದವು. ಹಾಗಾಗಿಯೇ ಈ ಯುಗವನ್ನು ಶೋಧನಾ ಯುಗ, ಪರ್ಯಟನಾ ಯುಗವೆನ್ನುತ್ತಾರೆ. ಹೊಸದಾದ ಹುಮ್ಮಸ್ಸಿನಿಂದ ವ್ಯಕ್ತಿತ್ವ ನಿರ್ಮಾಣಕ್ಕೆ ಅವಶ್ಯಕವಾದ ಪ್ರತಿಮಾಶಾಸ್ತ್ರ, ನಾಗರಿಕ ನಡೆ–ನುಡಿ ನಾವಿಂದು ಕರೆಯುವ ಮಾನವ ಶಾಸ್ತ್ರಗಳು ಪುರಾತನ ಗ್ರೀಕ್ ಹಾಗು ಲ್ಯಾಟಿನ್ ಪಠ್ಯಗಳ ಪ್ರಭಾವದಿಂದ ಉಗಮ ವಾದವು. ಜಗತ್ತಿನ ಬಗ್ಗೆ ಯೂರೋಪಿಯನ್ನರಿಗಿದ್ದ ಯೋಚನೆಗಳು ಹೊಸ ಸಂಸ್ಕೃತಿಗಳ ಸಂಪರ್ಕದಿಂದ ಬದಲಾದವು.

ಪುನರುಜ್ಜೀವನದ ಸಂಸ್ಕೃತಿಯಲ್ಲಿ ನಾಗರೀಕತೆ, ಸಭ್ಯತೆ, ಸೌಜನ್ಯ, ಸನ್ನಡತೆ ತುಂಬಾ ಪ್ರಮುಖ ಶಬ್ದಗಳಾಗಿದ್ದವು. ಸಭ್ಯತೆ, ಸೌಜನ್ಯ ಒಬ್ಬ ನಾಗರೀಕ ಮನುಷ್ಯನ ಗುರುತಾಗಿದ್ದವು. ಒಬ್ಬ ಜಂಟಲ್‌ಮನ್ ಆಗಿರುವವನು ಧೈರ್ಯವಂತ, ಕಲೆಯಲ್ಲಿ ಆಸಕ್ತಿಯುಳ್ಳ ವನು, ಸನ್ನಡತೆ ಹೊಂದಿದವನು, ಲ್ಯಾಟಿನ್ ಭಾಷೆಗೊತ್ತಿರುವವನೂ, ವಾಗ್ಮಿಯೂ ಆಗಿರಬೇಕಾಗಿತ್ತು.

ಪ್ರಾಟೆಸ್ಟೆಂಟರು ತಮ್ಮ ಹೊಸ ಧರ್ಮವನ್ನು ಶಾಂತಿಯಿಂದ ಅಭ್ಯಸಿಸಲು ಇಂಗ್ಲೆಂಡ್ ಮುಕ್ತದೇಶವಲ್ಲ ಎಂದು ತಿಳಿದು ಅಮೇರಿಕಾದ ವರ್ಜೀನಿಯಾ ಹಾಗು ಪೆನ್ಸಿಲ್ವೇನಿಯಾಗಳಲ್ಲಿ ವಸಾಹತುಗಳನ್ನು ನಿರ್ಮಿಸಿ ಅಮೇರಿಕಾದ ನಿರ್ಮಾಣಕ್ಕೆ ಕಾರಣರಾದರು. ಈಸ್ಟ್ ಇಂಡಿಯಾ ಕಂಪೆನಿ 1600ರಲ್ಲಿ ದೊರಕಿಸಿಕೊಂಡ ಶಾಸನಾಧಿಕಾರದಿಂದ ವಸಾಹತು ರಾಷ್ಟ್ರಗಳ ಮೇಲೆ ಹೆಚ್ಚಿನ ಅಧಿಕಾರ ಹೊಂದಿ ಇಂಗ್ಲೆಂಡ್ ಜಗತ್ತಿನ ಇತಿಹಾಸದಲ್ಲಿಯೇ ಅತ್ಯಂತ ಪ್ರಬಲ ರಾಷ್ಟ್ರವಾಗುವ ತಳಹದಿಯನ್ನು ಹಾಕಿಕೊಂಡಿತು. ಹಾಗೆಯೇ ವಕೀಲರು ಹಾಗು ವ್ಯಾಪಾರಿಗಳು ಆಸ್ತಿ–ಹಣ ಮಾಡುವುದನ್ನಾಗಲೀ, ಶ್ರೀಮಂತರ ಅನುಕರಣೆ ಮಾಡುವುದನ್ನಾಗಲೀ ಮೇಲ್ವರ್ಗದ ಜನರಿಗೆ ಸಹಿಸಲಾಗಲಿಲ್ಲ. ಆದ್ದರಿಂದ ಶಾಸ್ತ್ರೀಯವಾಗಿ ವಿದ್ಯಾವಂತ ವರ್ಗ ಮಾತ್ರವೇ ಆಡಳಿತ ನಡೆಸಲು ಯೋಗ್ಯವೆಂದು ಸಾರಿಕೊಂಡರು. ತನ್ನ ಪುಸ್ತಕ 'The Book named the Governer' ನಲ್ಲಿ Thomas Eliot ಹಣ ಮಾತ್ರವೇ ಒಬ್ಬ ವ್ಯಕ್ತಿಯನ್ನು ರಾಜ್ಯಾಧಿಕಾರ ನಡೆಸಲು ಅರ್ಹತೆ ನೀಡುವುದಿಲ್ಲ, ಬದಲಾಗಿ ಆತನಿಗೆ ಶಾಸ್ತ್ರೀಯ ಶಿಕ್ಷಣ, ಅಭಿಪ್ರಾಯ ತಿಳಿಸುವ ಶಕ್ತಿ ಮತ್ತು ಸ್ವಾತಂತ್ರ್ಯದ ತರಬೇತಿ ಅವಶ್ಯಕವೆನ್ನುತ್ತಾನೆ.

ಕೃಪೆ: ಪ್ರಮೋದ್ ಕೆ. ನಾಯರ್, A Short History of English Literature.

ಮೂರ್ಖರು ಜ್ಞಾನಿಗಳಿಂದ ಏನೂ ಕಲಿಯುವುದಿಲ್ಲ
ಆದರೆ ಜ್ಞಾನಿಗಳುಮೂರ್ಖರಿಂದ ಸಾಕಷ್ಟು ಕಲಿಯುತ್ತಾರೆ – ಡಚ್ ಗಾದೆ.

Prathispanda Kannada Monthly literary cultural periodical
Title verification no.- KARKAN 22840/10/1/2012 TC

## ಪ್ರತಿಸ್ಪಂದದ ಆಶಯಗಳು

೧. ಅನ್ಯಭಾಷಾ ಸಾಹಿತ್ಯವನ್ನು ಮಾತೃಭಾಷೆಯಲ್ಲಿಯೇ ಗ್ರಹಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನ.

೨. ಸಾಹಿತ್ಯವನ್ನು ಸೃಷ್ಟಿಸುತ್ತಿರುವ ಅಧಿಕಾರಗಳು, ಪ್ರಕ್ರಿಯೆಗಳು, ವಿಧಾನಗಳು ಮತ್ತು ದೃಷ್ಟಿಕೋನಗಳನ್ನು ಪರಿಚಯಿಸಿಕೊಳ್ಳುವುದು.

೩. ಸಾಹಿತ್ಯ/ಭಾಷೆ ಸೃಷ್ಟಿಸುತ್ತಿರುವ ಸಂಸ್ಕೃತಿ ಯನ್ನು ಅರ್ಥೈಸಿಕೊಳ್ಳುವುದು.

೪. ಪಾಶ್ಚಿಮಾತ್ಯ ಸಾಹಿತ್ಯ ಪ್ರಾಕಾರಗಳಲ್ಲಿ ಕಂಡು ಬರುವ ಪರಿಕಲ್ಪನೆಗಳು, ಶೈಲಿ-ರೂಪಗಳು, ನೋಟ-ಧೋರಣೆಗಳು ಸ್ಥಳೀಯ ಸಾಹಿತ್ಯ ಸಂದರ್ಭದಲ್ಲಿ ಸೃಷ್ಟಿಸುತ್ತಿರುವ ಸಂಕರಗಳನ್ನು, ಬಹುತ್ವವನ್ನು ಅರ್ಥಮಾಡಿಕೊಳ್ಳುವುದು.

೫. ಪ್ರಸಕ್ತ ಜಾಗತಿಕ ಮಟ್ಟದಲ್ಲಿ ರಚಿತವಾಗುತ್ತಿರುವ ಸಾಹಿತ್ಯ/ಸಾಂಸ್ಕೃತಿಕ ಬರಹ/ಸಿದ್ಧಾಂತಗಳು ದೇಶೀಯ ಸಾಹಿತ್ಯದ ಮೇಲೆ ಬೀರುತ್ತಿರುವ ಪ್ರಭಾವಗಳನ್ನು ಅಭ್ಯಸಿಸುತ್ತಾ ಸಾಹಿತ್ಯದ ಬಗೆಗಿನ ಅಭಿರುಚಿಯನ್ನು ಗಾಢವಾಗಿಸಿಕೊಳ್ಳುವುದು.

೬. ಇತಿಹಾಸದ ಹರಿವಿನಲ್ಲಿ ಆಗಿ-ಹೋದ ಸಾಹಿತ್ಯ ಕೃತಿಗಳ ಪ್ರಸ್ತುತತೆಯನ್ನು ವಿವರಿಸಿಕೊಳ್ಳುವುದು.

೭. ಮಾನವ ಘನತೆಯನ್ನು ಎತ್ತಿ ಹಿಡಿಯುವ ಮಾನವೀಯ ಏಳಿಗೆ ನಿರಂತರತೆಯ ಬೆಳಕಿನಡಿಯಲ್ಲಿ ಸಾಹಿತ್ಯದ ನಿಜವಾದ ವಿದ್ಯಾರ್ಥಿಗಳಾಗುವುದು.

"Book - Post"

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur